# ನಾಗರಮುರಿ

ದೇಸಾಯಿ ಪಾಂಡುರಂಗರಾಯರು
ಎಂ. ಎ.

ಕನ್ನಡನಾಡಿನ ವೀರ ಕಥಾವಳಿ

# ನಾಗರ ಮರಿ

(ಚಾರಿತ್ರಿಕ ಕಥಾಸಂಗ್ರಹ)

ಬರೆದವರು :

**ಶ್ರೀ. ದೇಸಾಯಿ ಪಾಂಡುರಂಗರಾಯರು, ಎಂ. ಎ.**

ವಿಜಯನಗರ ಸಾಮ್ರಾಜ್ಯ, ಮಿಂಚಿದ ಮಹಿಳೆಯರು, ಕುಂತಲೇಶ್ವರ,
ಮದಗಜಮಲ್ಲ ಮುಂತಾದ ಗ್ರಂಥಗಳ ಕರ್ತರು.



ಸಂಸ್ಕೃತಿ ಪ್ರಕಾಶನ,
ಧಾರವಾಡ

೧೯೫೨ ]                [ ೧-೦-೦

# ಪ್ರಕಾಶಕರ ಅರಿಕೆ



ಹಿಂದಿನ ಜೀವನದ ಅನುಭವವು ಇಂದಿನ ಜೀವನಕ್ಕೆ ಮಾರ್ಗದರ್ಶನ ವಿದ್ದಂತೆ. ನಾಡಿನ ಇತಿಹಾಸವೂ ನಾಡ ಜೀವನಕ್ಕೆ ಮಾರ್ಗದರ್ಶನ. ನಾಡಿನ ಜನರ ಜೀವನ ಉದಾತ್ತವಾದರೆ ನಾಡು ಶ್ರೇಷ್ಠವಾಗುವುದು. ಜನತೆಯಂತೆ ನಾಡು ರೂಪುಗೊಳ್ಳುವುದು.

ನಾಡಜನರ ಜೀವನಕ್ಕೆ ನಾಡಜೀವನಕ್ಕೆ ಕಾಲಕ್ರಮಣದಲ್ಲಿ ಹಿಂದಿನ ಇತಿಹಾಸವು ಗುರುಸ್ಥಾನದಲ್ಲಿ ನಿಂತು ಮಾರ್ಗ ತೋರುವುದು. ಹಿಂದಿನ ಇತಿಹಾಸವಿಲ್ಲದೆ ಇಂದಿನ ಇತಿಹಾಸವು ಹುಟ್ಟಲಾರದು. ಐತಿಹಾಸಿಕ ಸಾಹಿತ್ಯವು ನಮ್ಮಲ್ಲಿ ನಾಕಷ್ಟು ಬೆಳೆದಿಲ್ಲ,ಬೆಳವಣಿಗೆಯಾಗಿಲ್ಲ. ಇದಕ್ಕೆ ಜನರ ಒಲವು, ಆರ್ಥಿಕ ಪರಿಸ್ಥಿತಿ ಮತ್ತು ಆಳುವ ಸರಕಾರ ಇವೇ ಕಾರಣ.

ನಮ್ಮ ಜನರ ಸರಕಾರವಿದ್ದಾಗ ನಮ್ಮ ಆಶೆ ಆಕಾಂಕ್ಷೆಯನ್ನು ತೀರಿಸಿ ಕೊಳ್ಳಲು ನಾವು ಮುಂದಾಗಬೇಕು. ಅಂದರೆ ಸರಕಾರವು ಕಿವಿಗೊಡುವುದು. ನಮ್ಮ ನಾಡಿನ ಐತಿಹಾಸಿಕ ಚಾರಿತ್ರ್ಯವನ್ನು ಕಥೆ-ಕಾದಂಬರಿ-ಕವಿತೆ ಇತ್ಯಾದಿ ಗಳ ಮೂಲಕ ಪ್ರಕಾಶನಗೊಳಿನಬೇಕೆಂದು ಮನಸು ಮಾಡಿದ್ದೇನೆ. ಇದರಂತೆ ಶ್ರೀ. ಪಾಂಡುರಂಗರಾವ ದೇಸಾಯಿ ಇವರಿಗೆ ಕೇಳಲು ತಮ್ಮ ಪುಸ್ತಕವನ್ನು ಪ್ರಕಾಶನಕ್ಕೆ ಕೊಟ್ಟಿದ್ದಾರೆ. ವಾಚಕರು ಮತ್ತು ವಿದ್ಯಾರ್ಥಿಗಳು ಇದರ ಸದುಪಯೋಗ ಮಾಡಿಕೊಂಡು ನಮ್ಮ ಹಿಂದಿನ ಇತಿಹಾಸದ ವೈಭವವನ್ನು ನೆನೆದು ಇಂದಿನ ಜೀವನವನ್ನು ಉದಾತ್ತಗೊಳಿಸಬೇಕೆಂದು ಬಯಸುವೆನು.

ಶಾಲಾ ಖಾತೆಯವರು ಇಂಥ ಪಕ್ಷಾತೀತ ಪುಸ್ತಕಗಳನ್ನು, ಐತಿಹಾಸಿಕ ವಿವಿಧ ವಾಙ್ಮಯವನ್ನು ಪಠ್ಯವನ್ನಾಗಿ ಮಾಡಿ ಪ್ರೋತ್ಸಾಹಿಸಿದಲ್ಲಿ ಶಿಕ್ಷಣ

ಕಾರ್ಯಭಾರವೂ ಕಡಮೆಯಾಗುವದಲ್ಲದೆ ವಿದ್ಯಾರ್ಥಿಗಳಿಗೆ ಯೋಗ್ಯ ಪುಸ್ತಕ ಗಳನ್ನೂ ಕೊಟ್ಟಂತಾಗುವುದು.

ಈ ಸಂಗ್ರಹದಲ್ಲಿಯ 'ನಾಗರ ಮರಿ' ಕತೆಯು ಪ್ರಜಾಮತ ಪತ್ರಿಕೆಯ ೧೯೫೦ರ ದೀಪಾವಳಿ ಸಂಚಿಕೆಯಲ್ಲಿ ಪ್ರಕಟವಾಗಿದೆ.

ಈ ಪುಸ್ತಕ ಪ್ರಕಾಶನಕ್ಕೆ ಶ್ರೀ. ರಾಮಣ್ಣ ಆಕಳವಾಡಿಯವರು ಬಹಳೇ ಸಹಾಯ ಮಾಡಿದ್ದಾರೆ. ಇದು ಅವರ ಶಿಕ್ಷಣಪ್ರೇಮದ ದ್ಯೋತಕ. ಅವರಿಗೂ ಅಂದವಾಗಿ ಮುದ್ರಿಸಿಕೊಟ್ಟ ಶ್ರೀ. ವಿನೀತ ರಾಮಚಂದ್ರರಾಯರಿಗೂ ಪ್ರಕಾಶಕನು ಉಪಕೃತನೇ. ಸಜ್ಜನರು ಉದಾರಭಾವದಿಂದ ಗ್ರಂಥವನ್ನು ಬರಮಾಡಿಕೊಳ್ಳುವರೆಂದು ಆಶಿಸುವ,

**ಉಡುಪಿ ಭೀ. ಬೀಡಿ**

---

# ಮುನ್ನುಡಿ



ಇದೊಂದು ಕನ್ನಡನಾಡಿನ ವೀರಜೀವನವನ್ನು ಚಿತ್ರಿಸುವ ಕಥೆಗಳ ಚಿಕ್ಕ ಪುಸ್ತಕ. ಇದರಲ್ಲಿ ನಾಲ್ಕು ಕತೆಗಳಿವೆ. ಈ ಎಲ್ಲ ಕತೆಗಳಲ್ಲಿ ಹೆಚ್ಚು ಕಡಿಮೆ ಚಾರಿತ್ರಕ ಆವರಣವು ಹರಡಿಕೊಂಡಿದೆ. ಇವುಗಳಲ್ಲಿ ಒಂದಾದ 'ನಾಗರ ಮರಿ' ಎಂಬ ಕತೆಯ ಮೂಲಕ ಈ ಸಂಗ್ರಹಕ್ಕೆ ಆ ಹೆಸರು ಬಂದಿದೆ.

ಈ ಕತೆಗಳ ಮೂಲವಸ್ತುವಿನ ವಿಚಾರವಾಗಿ ಒಂದೆರಡು ಸಂಗತಿಗಳನ್ನು ಹೇಳುವುದು ಉಚಿತವಾದೀತು. ಇಲ್ಲಿಯ ಮೊದಲನೆಯ ಕತೆಯ ನಾಯಕ ಕುಮಾರ ರಾಮ. ಈತನ ಜೀವನ ವೃತ್ತಾಂತವನ್ನು ಕುರಿತು ಹಿಂದಿನ ಅನೇಕ ಕವಿಗಳು ಕಾವ್ಯಗಳನ್ನು ರಚಿಸಿದ್ದಾರೆ. ಆಧುನಿಕ ಲೇಖಕರು ಕತೆ ನಾಟಕಗಳನ್ನು ಬರೆದಿದ್ದಾರೆ. ಈತನ ಪುಣ್ಯಸ್ಮೃತಿ ನಮ್ಮ ನಾಡಿನ ಅನೇಕ ಭಾಗಗಳಲ್ಲಿ ಇಂದಿಗೂ ಜಾಗೃತವಾಗಿದೆ. ಮೊದಲು, ಬಳ್ಳಾರಿ ಭಾಗದ ಶಾಸನಗಳನ್ನು ಪರೀಕ್ಷಿಸುತ್ತಿರುವಾಗಲೂ ಮುಂದೆ, ಧಾರವಾಡ ಜಿಲ್ಲೆಯ ಹಾನಗಲ್ ತಾಲೂಕಿನಲ್ಲಿ ಶಾಸನಗಳ ಸಂಶೋಧನಕ್ಕಾಗಿ ಸಂಚರಿಸುತ್ತಿರುವಾಗಲೂ ಕುಮಾರ ರಾಮನ ಸ್ಮರಣೆ ಮತ್ತೆ ಮತ್ತೆ ಉಂಟಾಗಿ ಆತನ ಯಶಃಕಾಯವು ನನ್ನ ಮನಸ್ಸಿನಮೇಲೆ ವಿಲಕ್ಷಣ ಪರಿಣಾಮವನ್ನು ಉಂಟುಮಾಡಿತು. ಕೆಲವೆಡೆ ಕುಮಾರ ರಾಮನ ಆಖ್ಯಾಯಿಕೆಗಳು ದೊರೆತುವು. ಕೆಲವೆಡೆ ಕುಮಾರ ರಾಮನ ಶಾಸನಗಳು ಉಪಲಬ್ಧವಾದುವು. ಕೆಲವೆಡೆ ಕುಮಾರ ರಾಮನ ಅಶ್ವಾರೋಹಿ ವೀರ ವಿಗ್ರಹಗಳು ಕಣ್ಣೊಳಿಸಿದುವು. ಈ ಸ್ಮಾರಕಗಳನ್ನು ಅವಲೋಕಿಸುತ್ತಿರುವಾಗ ಕನ್ನಡ ನಾಡಿನ ಈ ವಿಭೂತಿ ಪುರುಷನು ಎಲ್ಲೆಲ್ಲಿಯೂ ನನ್ನ ಮಾನಸಲೋಕದಲ್ಲಿ ಸುಳಿದಾಡಿ ತನ್ನ ಚರಿತ್ರೆಯನ್ನು ಬರೆಯಲು ನನ್ನನ್ನು ಪ್ರೇರಿಸುತ್ತಿರುವಂತೆ ಭಾಸವಾಯಿತು. ಈ ಮನಃಸ್ಥಿತಿಯಲ್ಲಿರುವಾಗ ಈತನ ವಿಷಯವುಳ್ಳ ಹಲವಾರು

ಶಾಸನಗಳನ್ನು ಅಭ್ಯಾಸ ಮಾಡಿ, ಹೆಚ್ಚಾಗಿ ಹಾವೇರಿ ತಾಲೂಕಿನ ಸಂಗೂರು ಗ್ರಾಮದ ಈತನ ಸ್ಮಾರಕ ಶಾಸನವನ್ನು ಆಧರಿಸಿ ಈ ಕತೆಯನ್ನು ಬರೆದೆನು.

'ಅಹುದೋ ಎದೆಗಾರ' ಈ ಕತೆಯ ವಸ್ತು ಗುಮ್ಮನಾಯಕನ ಪಾಳೆಗಾರರ ಚರಿತ್ರೆಯಿಂದ ಎತ್ತಿಕೊಂಡುದು. 'ನಾಗರ ಮರಿ'ಯ ಸಂನಿವೇಶವು 'ಕೆಳದಿ ನೃಪವಿಜಯ'ದಲ್ಲಿ ವರ್ಣಿತವಾಗಿದೆ. 'ಗಂಡುಭೂಮಿ'ಯಲ್ಲಿಯ ಘಟನೆಗಳು ಚಿತ್ರದುರ್ಗದ ಪಾಳೆಗಾರರ ವೃತ್ತಾಂತದಿಂದ ಸಂಗ್ರಹಿಸಿದುವು.

ಮಾನವಜೀವನದ ಸಸಿ ಆಸೆಯ ನೆಲದಲ್ಲಿ ಮೊಳೆತು ಉತ್ಸಾಹದ ತನಿನೀರಿನಿಂದ ಬೆಳೆಯತಕ್ಕುದಾಗಿದೆ. ಮಾನವನ ಬದುಕನ್ನು ಚೇತನಗೊಳಿಸುವ ಒಂದು ಅಮೋಘ ಸಾಧನವು ಸಾಹಿತ್ಯ. ಪ್ರಬುದ್ಧವಾಗುತ್ತಿರುವ ಮಾನವನ ಬಾಳು ಸಾಹಿತ್ಯದ ಬಗೆಬಗೆಯ ಸಂಸ್ಕಾರಗಳಿಂದ ರೂಪುಗೊಳ್ಳುತ್ತದೆ. ಈ ಸಂಸ್ಕಾರಗಳು ಪರಿಶುದ್ಧವೂ ಪ್ರಮೋದಕರವೂ ಆಗಿದ್ದಂತೆ ಜೀವನದ ಔನ್ನತ್ಯವು ಹೆಚ್ಚುತ್ತದೆ.

ಶೌರ್ಯ ಸಾಹಸಗಳ ವೀರಕಥಾ ಸಾಹಿತ್ಯವು ಬೆಳೆಯುವ ಜೀವನಕ್ಕೆ ಯಾವಾಗಲೂ ಪ್ರಿಯವಾದುದು; ಹಿತವೂ ಆದುದು. ಇಂತಹ ಸಾಹಿತ್ಯವು ಸತ್ಯಸೃಷ್ಟಿಯ ವಿಷಯವೂ ಆಗಿದ್ದರೆ ಅದರ ಮೇಲ್ಮೆ ಅಧಿಕವಾಗುತ್ತದೆ. ಅದು ತಮ್ಮ ನಾಡಿನವರ, ತಮ್ಮ ಪೂರ್ವಜರ ಚರಿತ್ರೆಗೆ ಸಂಬಂಧಿಸಿದ್ದರೆ, ಮತ್ತಷ್ಟು ಪ್ರಭಾವಿಯಾಗುತ್ತದೆ. ಇಂತಹ ಸಾಹಿತ್ಯದಿಂದ ಸ್ಫೂರ್ತಿಗೊಂಡ ಅಂತಃಕರಣಗಳು ಸ್ವಾಭಿಮಾನ, ಆತ್ಮನಿಷ್ಠೆ ಮತ್ತು ಆಶಾವಾದದಿಂದ ಪೂರಿತವಾಗಿ ಮುಂದಣ ಭವ್ಯಜೀವನದ ಹೊಂಗನಸುಗಳನ್ನು ಕಾಣುವುವು. ಆ ಕನಸುಗಳು ಮುಂದೆ ಒಂದಲ್ಲ ಬೇರೊಂದು ವಿಧದಿಂದ ನನಸಾಗಿ ಮೂರ್ತಸ್ವರೂಪಕ್ಕೆ ಬರುವುವು. ಇಂತು ಜೀವನವನ್ನು ವರ್ಧಿಷ್ಣುವಾಗಿಸುವ, ತೇಜಸ್ವಿಯಾಗಿಸುವ, ಯಶಸ್ವಿಯಾಗಿಸುವ ಸುಸಂಸ್ಕಾರಗಳಲ್ಲಿ ವೀರಕಥಾಸಾಹಿತ್ಯಕ್ಕೆ ಗಣ್ಯವಾದ ಒಂದು ಸ್ಥಾನವಿದೆ. ಈ ಮಾತಿನ ಅನುಭವವನ್ನು ಮಹಾಪುರುಷರ ಜೀವನಚರಿತ್ರೆಯ ವಿಮರ್ಶೆಯಿಂದ ಕಂಡುಕೊಳ್ಳಬಹುದಾಗಿದೆ.

ಈ ಬಗೆಯ ವೀರಕಥಾಸಾಹಿತ್ಯವು ನಮ್ಮ ವಾಙ್ಮಯದಲ್ಲಿ ಸಾಕಷ್ಟು ಇಲ್ಲ. ಇಂತಹ ಸಾಹಿತ್ಯದ ಆವಶ್ಯಕತೆಯನ್ನು ಕುರಿತು ಹೆಚ್ಚಾಗಿ ಪ್ರತಿಪಾದಿಸುವ ಅಗತ್ಯವಿಲ್ಲ. ಈ ದೃಷ್ಟಿಯಿಂದ ಕನ್ನಡ ನಾಡಿನ ವೀರಜೀವನವನ್ನು ಚಿತ್ರಿಸುವ ಒಂದು ಅಲ್ಪ ಪ್ರಯತ್ನವನ್ನು ನಾಲ್ಕು ವರ್ಷಗಳ ಹಿಂದೆ ಮಾಡಿದೆನು. ಆ ಪ್ರಯತ್ನದ ಫಲವು 'ಮದಗಜಮಲ್ಲ' ಎಂಬ ಕೃತಿ. ಈ ಪುಸ್ತಕವು ಬೇಗನೆ ಬಹು ಜನರ ಮೆಚ್ಚುಗೆಯನ್ನು ಗಳಿಸಿತು. ಶಾಲೆಯ ಅಭ್ಯಾಸ ಕ್ರಮದಲ್ಲಿಯೂ ಇದಕ್ಕೆ ಒಂದು ಅವಕಾಶವು ದೊರೆತಿತು.

ಕನ್ನಡ ನಾಡಿನ ವೀರಕಥಾವಳಿಯನ್ನು ಮುಂದುವರಿಸಲು ನಾನು ಮಾಡಿದ ಎರಡನೆಯ ಪ್ರಯತ್ನವು ಈ 'ನಾಗರ ಮರಿ'. ಇದಾದರೂ ಈ ಹಿಂದಿನದರಂತೆ ಓದುಗರ ವಿಶ್ವಾಸವನ್ನು ಸಂಪಾದಿಸಬಹುದು ಎಂದು ಆಶಿಸುತ್ತೇನೆ. ಈ ಓದುಗರೋ ಹೆಚ್ಚಾಗಿ ಪ್ರಬುದ್ಧರಾಗುತ್ತಿರುವ ಯುವಕರು—ಕನ್ನಡ ನಾಡಿನ ಭಾವೀ ಭಾಗ್ಯವಿಧಾತರು.

**ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು !**

**—ದೇಸಾಯಿ ಪಾಂಡುರಂಗರಾಯ**

# ಪರಿವಿಡಿ



ಕತೆ ಒಂದು

# ಕಂಪಿಲ ಕುಮಾರ



ಕಂಪಿಲ ಕುಮಾರ ಕುಮಾರ ರಾಮನಾಥನು ಕರ್ನಾಟಕದ ಮಹಾವೀರರಲ್ಲಿ ಅಗ್ರಗಣ್ಯನು. ಈತನ ಪುಣ್ಯಸ್ಮೃತಿ ಇಂದಿಗೂ ನಮ್ಮ ನಾಡಿನ ಅನೇಕ ಭಾಗಗಳಲ್ಲಿ ಜಾಗೃತವಾಗಿದೆ. ಈತನ ಹಲವಾರು ಸ್ಮಾರಕಗಳು ವಿಜಯನಗರ ಕಾಲದಲ್ಲಿ ಸ್ಥಾಪನವಾದವು. ಇಂತಹ ಒಂದು ಚಿರಸ್ಮರಣೀಯ ಘಟನೆಯನ್ನು ಹೃದಯಂಗಮವಾಗಿ ಇಲ್ಲಿ ಚಿತ್ರಿಸಿದೆ. ಈ ಕಥೆಯ ಕಾಲ ಸ್ಥೂಲವಾಗಿ ಹದಿನೈದನೆಯ ಶತಮಾನದ ಪೂರ್ವಭಾಗ.

# [ ೧ ]

" ಶರಣು ಶರಣು. ಪಾದಕ್ಕೆ ಬಿದ್ದೆ ಬುದ್ಧೀ."

" ಜಯ ಭುವನೇಶ್ವರೀ."

" ಏಕೆ ದೊರೆ, ನನ್ನನ್ನು ಬರಹೇಳಿದಿರಂತೆ."

" ಹೌದು ಬೀರಣ್ಣ. ಒಂದು ಅಗತ್ಯದ ಕೆಲಸವಿದ್ದುದರಿಂದ ನಿನ್ನನ್ನು ಕರೆಸಿದ್ದೇವೆ. ಅದನ್ನು ನಂಬಿಕೆಯಿಂದ ನೆರವೇರಿಸತಕ್ಕ ಹೊಣೆ ನಿನ್ನದಾಗಿದೆ, ನಾಯಕಾ."

" ಹೀಗೇಕೆ ಹೇಳತೀರಿ ದೊರೆ! ತಮ್ಮ ಯಾವ ಮಾತಿಗೆ ನಾನು ಹೊರತಾಗಿದ್ದೇನೆ? ಬಹಳ ಕಾಲದಿಂದ ನಮ್ಮ ಕುಲದವರು ತಮ್ಮ ಪಾದಗಳಲ್ಲಿ ಸೇವೆಯನ್ನು ಸಲ್ಲಿಸುತ್ತ ಬಂದಿದ್ದೇವೆ. ನನ್ನ ಜೀವಮಾನ ಇರುವ ತನಕ ಈ ಬಿರುದನ್ನು ಕಾಪಾಡಿಕೊಂಡು ಹೋಗುತ್ತೇನೆ. ಮುಂದಿನವರ ವಿಚಾರವನ್ನು ಯಾರು ಬಲ್ಲರು?"

" ಹಾಗಲ್ಲ ಬೀರಣ್ಣ! ನಿನ್ನಂತಹ ಮುಪ್ಪಿನ ಮುದುಕನಿಗೆ ಕಷ್ಟ ಕೊಡುವುದೆಂದರೆ ನಮ್ಮ ಮನಸ್ಸಿಗೆ ಹೇಗೋ ಆಗುತ್ತದೆ. ಆದರೆ ಕೆಲಸಕ್ಕೆ ತಕ್ಕ ಆಳನ್ನು ಕಂಡುಹಿಡಿದರೆ ಕೆಲಸವು ಅರ್ಧ ಜಯಶೀಲವಾದಂತೆ."

" ಅದೇನು ದೊಡ್ಡ ಸಮಾಚಾರ ಬಿಡಿರಿ, ದೊರೆಗಳೇ! ತಮ್ಮ ವಿಶ್ವಾಸಕ್ಕಿಂತ ಹೆಚ್ಚಿನದೇನಿದೆ? ನನ್ನೀ ಬದುಕೆಲ್ಲ ಸ್ವಾಮಿಕಾರ್ಯಕ್ಕೆ ಮುಡಿಪಾಗಿದೆ."

" ಅಂತೆಯೇ ನಿನ್ನನ್ನು ಕರೆಸಿದ್ದೇವೆ, ಬೀರಣ್ಣ. ಬಾ ಕುಳಿತುಕೋ."

ಮೇಲಿನ ಸಂಭಾಷಣೆ ಸೇನಾಧಿಪತಿ ಮಾದರಸ ಮತ್ತು ತಳವಾರ ಬೀರನಾಯಕ ಇವರ ನಡುವೆ ನಡೆಯಿತು. ಮಾದರಸನು ಹೇಳಿ ಕಳುಹಿದಂತೆ ಅರವತ್ತು ವರ್ಷದ ಮುದುಕನಾದ ಬೀರನಾಯಕನು ಬಡಿಗೆಯೊಂದಿಗೆ ಚಂಗಾಪುರದ ಗ್ರಾಮಚಾವಡಿಗೆ ಬಂದಿದ್ದನು. ಚಾವಡಿಯಲ್ಲಿ ಆ ಗ್ರಾಮದ ಪ್ರತಿಷ್ಠಿತ ನಾಗರಿಕರು ನೆರೆದಿದ್ದರು.

ಇದೀಗ ವಿಜಯನಗರದ ರಾಯರ ಆಳಿಕೆ ದಕ್ಷಿಣ ಭಾರತದ ಬಹು ಭಾಗದಲ್ಲಿ ಭದ್ರವಾಗಿ ನೆಲೆಯೂರಿತ್ತು. ಇಮ್ಮಡಿ ಹರಿಹರ ಮಹಾರಾಯನ ಕುಮಾರ ದೇವರಾಯನು ವಿಜಯನಗರದ ರತ್ನಸಿಂಹಾಸನದಲ್ಲಿ ಆರೂಢನಾಗಿ ಪ್ರಜೆಗಳನ್ನು ಪರಿಪಾಲನ ಮಾಡುತ್ತಿದ್ದನು. ಸೇನಾಧಿಪತಿ ಮಾದರಸನು ವಿಜಯನಗರದ ರಾಜ್ಯದಲ್ಲಿ ಒಂದು ಭಾಗದ ಅಧಿಕಾರಿಯಾಗಿದ್ದನು. ಆತನ ಮುಖ್ಯಸ್ಥಳ ಚಂಗಾಪುರ. ಈ ಗ್ರಾಮವು ಚಂದ್ರಗುತ್ತಿ ನಾಡಿಗೆ ಒಳ ಪಟ್ಟಿದ್ದು, ಚಂದ್ರಗುತ್ತಿ ನಾಡು ಗೋವಾ ಪ್ರಾಂತದಲ್ಲಿ ಸೇರ್ಪಡೆಯಾಗಿತ್ತು. ಈ ಚಂಗಾಪುರವು ಇಂದಿನ ಧಾರವಾಡ ಜಿಲ್ಲೆಯ ಹಾವೇರಿ ತಾಲೂಕಿನ ಸಂಗೂರು ಎಂಬ ಗ್ರಾಮವು.

ಸೇನಾಧಿಪತಿ ಮಾದರಸ ಮತ್ತು ಚಂಗಾಪುರ ಪ್ರದೇಶದ ಜನಗಳು ಸಾಮಾನ್ಯವಾಗಿ ವಿಜಯನಗರ ರಾಯರ ಅತ್ಯಂತ ಅಭಿಮಾನಿಗಳೂ ಸ್ವಾಮಿ ನಿಷ್ಠರೂ ಆಗಿದ್ದರು. ಅವರ ಅಭಿಮಾನಕ್ಕೆ ಇನ್ನೂ ಒಂದು ವಿಶಿಷ್ಟ ಸಂಗತಿ ಯಿಂದ ಹೆಚ್ಚಿನ ಕಳೆಯೇರಿತ್ತು. ಅದು ಹೀಗೆ. ಹರಿಹರ ಬುಕ್ಕರು ಪರಕೀ ಯರ ಆಕ್ರಮಣವನ್ನು ತಡೆಗಟ್ಟಿ ಆನೆಗುಂದಿಯ ಪ್ರದೇಶದಲ್ಲಿ ವಿಜಯನಗರ ರಾಜ್ಯವನ್ನು ಸಂಸ್ಥಾಪಿಸಿದ ಶ್ರೇಯಸ್ಸಿಗೆ ಅರ್ಹರಾಗಿರುವರಲ್ಲವೆ ? ಆದರೆ ವಿಜಯನಗರ ಸ್ಥಾಪನೆಗೆ ಸ್ವಲ್ಪ ಕಾಲ ಮುಂಚೆ ಅದೇ ಆ ಆನೆಗುಂದಿ ಪ್ರದೇಶದ ಬಳಿಯಲ್ಲಿ ಇನ್ನಿಬ್ಬರು ಮಹಾವೀರರು ಅದೇ ವಿಧವಾಗಿ ಅದ್ಭುತ ಶೌರ್ಯ ಪ್ರತಾಪದಿಂದ ಪರಕೀಯರ ದಾಳಿಯನ್ನು ಇದಿರಿಸಿ ಆ ಹೋರಾಟ ದಲ್ಲಿ ತಮ್ಮ ಪ್ರಾಣಗಳ ಬಲಿದಾನ ಮಾಡಿ ಅಮರಕೀರ್ತಿಭಾಜನರಾಗಿದ್ದರು. ಈ ಮಹಾವೀರರು ಹೊಸಮಲೆ ರಾಜ್ಯದ ಒಡೆಯರೂ ಕುಮ್ಮಟದುರ್ಗದ ಅಧಿಪತಿಗಳೂ ಆದ ಕಂಪಿಲರಾಯ ಮತ್ತು ಆತನ ಕುಮಾರ ಕುಮಾರ ರಾಮನಾಥ ಇವರು. ಇವರ ತ್ಯಾಗವು ವಿಜಯನಗರದ ಸಂಸ್ಥಾಪಕರಿಗೆ ಬೆಳಕನ್ನು ತೋರಿಸಿತು.

ದಿಲ್ಲಿಯ ಮುಸಲ್ಮಾನ ಅರಸರ ದಂಡಿನ ದಾಳಿಯನ್ನು ಇದಿರಿಸುತ್ತ ಕಂಪಿಲರಾಯ ಮತ್ತು ಕುಮಾರ ರಾಮನಾಥ ಇವರು ಪತನ ಹೊಂದಿದ ಬಳಿಕ ಮುಂದೆ ಸುಮಾರು ೧೦ ವರ್ಷಗಳಲ್ಲಿ ವಿಜಯನಗರದ ಸ್ಥಾಪನೆ

ಆಯಿತು. ಇದರಿಂದ ಕಂಪಿಲರಾಯನ ಸೇವೆಯಲ್ಲಿದ್ದ ಅನೇಕ ಅಧಿಕಾರಿಗಳು ವಿಜಯನಗರದ ಅರಸರ ನೆರಳಿಗೆ ಹೋಗಿ ಅವರ ಸಹಾಯವನ್ನು ಪಡೆದರು. ಇಂತಹರಲ್ಲಿ ನೇನಾಧಿಪತಿ ಮಾದರಸನ ಮನೆತನವು ಒಂದು·ಮಾದರಸನ ತಂದೆ ಸೇನಾಧಿಪತಿ ಸಂಗಮರಸ. ಸಂಗಮರಸನ ತಂದೆ ಸುಪ್ರಸಿದ್ಧ ಮಹಾಮಂತ್ರಿ ಬೈಚವೆಗ್ಗಡೆ. ಬೈಚವೆಗ್ಗಡೆ ಕಂಪಿಲರಾಯನ ವಿಶ್ವಾಸದ ಮಂತ್ರಿ, ಬಾಹತ್ತರ ನಿಯೋಗಾಧಿಪತಿ ಮತ್ತು ಪತಿಕಾರ್ಯಧುರಂಧರನಾಗಿದ್ದನು.

ಕಂಪಿಲರಾಯನ ಕುಮಾರ ಕುಮಾರ ರಾಮನಾಥನ ಬದುಕು ಕೇವಲ ಶೌರ್ಯ, ಸಾಹಸ ಮತ್ತು ಪರಾಕ್ರಮದಿಂದ ಮಾತ್ರವಲ್ಲ, ಸತ್ಯನಿಷ್ಠೆ, ನೀತಿವಂತಿಕೆ ಮತ್ತು ಕರ್ತವ್ಯಜಾಗೃತಿ, ಮೊದಲಾದ ಉದಾತ್ತ ದೈವೀ ಗುಣಗಳಿಂದ ಪ್ರಕಾಶಮಾನವಾದ ಆದರ್ಶ ಜೀವನವಾಗಿದ್ದಿತು. ಈ ಕಾರಣದಿಂದ ಮುಂದಿನ ಅನೇಕ ತಲೆಮಾರಿನವರಿಗೆ, ಅದರಲ್ಲಿಯೂ ವಿಶೇಷವಾಗಿ ಮಾದರಸನಂತಹ ಆತನ ಪರಿವಾರದ ಪೀಳಿಗೆಯವರಿಗೆ, ಕಂಪಿಲಕುಮಾರ ಕುಮಾರ ರಾಮನಾಥನ ಪುಣ್ಯಸ್ಮೃತಿ ಚಿರಕಾಲ ಸ್ಫೂರ್ತಿಪ್ರದವಾಯಿತು. ಇಂತಹ ಜನಗಳಿಗೆ ಕುಮಾರ ರಾಮನಾಥನು ಅಲೌಕಿಕ ದೈವೀ ವ್ಯಕ್ತಿಯಾಗಿ ಪರಿಣಮಿಸಿದ್ದನು.

ಇದೀಗ ಸೇನಾಧಿಪತಿ ಮಾದರಸ ಮತ್ತು ಆತನ ಬಂಧುಮಿತ್ರರು ಚಂಗಾಪುರ ಗ್ರಾಮದಲ್ಲಿ ಕುಮಾರ ರಾಮನಾಥನ ಹೆಸರಿನಲ್ಲಿ ಒಂದು ಚಿರಸ್ಥಾಯಿ ಸ್ಮಾರಕವನ್ನು ನಿಲ್ಲಿಸಬೇಕೆಂದು ಯೋಚಿಸಿದ್ದರು. ಈ ಸಂದರ್ಭದಲ್ಲಿ ಸೇನಾಧಿಪತಿ ಮಾದರಸನು ತಳವಾರ ಬೀರನಾಯಕನನ್ನು ಬರಮಾಡಿ ಕೊಂಡಿದ್ದನು.

ಬೀರನಾಯಕನು ಕುಳಿತುಕೊಂಡ ಬಳಿಕ ಆತನನ್ನು ಹತ್ತಿರಕ್ಕೆ ಕರೆದು ಮಾದರಸನು ಮಾತನ್ನು ಮುಂದುವರಿಸಿದನು. “ ಬೀರಣ್ಣ, ಕೇಳು ಮೊನ್ನೆ ನಾವೆಲ್ಲರು ಸೇರಿ ನಮ್ಮೂರಲ್ಲಿ ಮಹಾನುಭಾವ ಕುಮಾರ ರಾಮನಾಥನ ಸ್ಮಾರಕವನ್ನು ಸ್ಥಾಪಿಸಬೇಕೆಂದು ಯೋಚಿಸಿದ್ದೇವೆ. ”

ಈ ಮಾತನ್ನು ಕೇಳಿ ಬೀರನಾಯಕನು ಬೆಚ್ಚಿಬಿದ್ದನು. ಆನಂದ ಮತ್ತು ಭಕ್ತಿಪರವಶನಾಗಿ ಸದ್ಗದಿತ ಕಂಠದಿಂದ ಉಸಿರಿದನು. “ ಏನು

ದೊರೆಗಳೇ ! ಶ್ರೀ ರಾಮನಾಥದೇವರ ಸ್ಮಾರಕವೇ, ನಮ್ಮೂರಲ್ಲಿ ! ಆಹ, ಈ ಪುಣ್ಯದಿಂದ ನಮ್ಮ ಕುಲಕೋಟಿಗಳು ಉದ್ಧಾರವಾಗುವವು. ”

ಹೀಗೆ ಉದ್ಗಾರಗಳನ್ನು ಹೊರಡಿಸಿ ಬೀರನಾಯಕನು ದಿಗ್ಗನೆ ಎದ್ದು ನಿಂತನು. ಕೈಗಳನ್ನು ಜೋಡಿಸಿ ಮೇಲಕ್ಕೆತ್ತಿ, “ ಶ್ರೀರಾಮನಾಥದೇವಾ ! ಶ್ರೀರಾಮನಾಥದೇವಾ!” ಎಂದು ಎರಡು ಮೂರು ಸಲ ಧ್ಯಾನದಲ್ಲಿ ನಾಮವನ್ನು ಉಚ್ಚರಿಸಿ ಉದ್ದಕ್ಕೆ ಸಾಷ್ಟಾಂಗ ಪ್ರಣಾಮ ಮಾಡಿದನು. ಮಾದರಸನ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ತನ್ನ ತಲೆಯಮೇಲೆ ಇರಿಸಿ ಕೊಂಡನು.

ಬೀರನಾಯಕನ ಈ ಭಕ್ತಿಯನ್ನು ಕಂಡು ಮಾದರಸನ ಮನಸ್ಸಿಗೆ ಉದ್ರೇಕವಾಯಿತು. ಆತನು ಬೀರನಾಯಕನನ್ನು ಎಬ್ಬಿಸಿ ಗಟ್ಟಿಯಾಗಿ ತಕ್ಕೆಯಲ್ಲಿ ಅಪ್ಪಿಕೊಂಡನು. ಮಾದರಸನ ಕಣ್ಣೀರು ಕೋಡಿಯಾಗಿ ಹರಿದು ಬೀರನಾಯಕನ ದೇಹವನ್ನು ಒದ್ದೆಯಾಗಿಸಿತು.

ಮಾದರಸನು ಅನಂತರ ಅಪ್ಪುಗೆಯಿಂದ ಅಗಲಿ ತನ್ಮಯತೆಯಿಂದ ಅಳಕುವ ದನಿಯಲ್ಲಿ ನುಡಿದನು: “ ಬೀರಣ್ಣಾ, ಧನ್ಯ ನೀನು ! ಮಹಾತ್ಮಾ ಶ್ರೀರಾಮನಾಥರ ಪಾವನ ಸ್ಮೃತಿ ನಮ್ಮೆಲ್ಲರನ್ನು ಪವಿತ್ರಗೊಳಿಸುವುದೆಂಬಲ್ಲಿ ಸಂದೇಹವಿಲ್ಲ. ಇಂತಹ ಪುಣ್ಯಪುರುಷನನ್ನು ಪ್ರತ್ಯಕ್ಷವಾಗಿ ಕಂಡು ಒಡ ನಾಡಿದ ಮಹಾಮಂತ್ರಿ ಬೈಚವೆಗ್ಗಡೆಗಳ ವಂಶದಲ್ಲಿ ಹುಟ್ಟಿರಬೇಕಾದರೆ ನನ್ನ ಪೂರ್ವ ಜನ್ಮದ ಸುಕೃತವು ಬಲವತ್ತರವಾಗಿರಬೇಕು. ತಾತ ಬೈಚ ವೆಗ್ಗಡೆಗಳನ್ನು ನಾನು ನೋಡಿಲ್ಲ. ಆವರೆ ಬೈಚವೆಗ್ಗಡೆಗಳು ತಾವು ರಾಮ ನಾಥರ ವಿಚಾರದಲ್ಲಿ ಪ್ರತ್ಯಕ್ಷವಾಗಿ ಕಂಡು ಅನುಭವಿಸಿದ ಅನೇಕ ಸಂಗತಿ ಗಳನ್ನು ತಂದೆ ಸಂಗಮರಸರ ಮುಂದೆ ಆಗಾಗ ವರ್ಣಿಸುತ್ತಿದ್ದರಂತೆ. ಅವನ್ನು ನನ್ನ ತಂದೆಯ ಮುಖದಿಂದ ಕೇಳುವ ಸಂದರ್ಭಗಳಲ್ಲೆಲ್ಲ ನಾನು ರೋಮಾಂಚಿತನಾಗುತ್ತಿದ್ದೆನು.”

“ ಆಗದೆ ಏನು ದೊರೆ ! ತಮ್ಮಂತಹ ದೊಡ್ಡವರ ವಿಚಾರವು ಹಾಗಿ ರಲಿ. ನನ್ನಂತಹ ಬಡಪಾಯಿಯ ಭಾಗ್ಯವು ಎಷ್ಟೆಂದು ಹೇಳಲಿ ! ತಮ್ಮಂತೆ ನಾನಾದರೂ ಈ ಕಣ್ಣಿನಿಂದ ರಾಮನಾಥದೇವರನ್ನು ನೋಡಿದವನಲ್ಲ.

ಆದರೆ ನನ್ನ ತಂದೆ ಮಲ್ಲಪನಾಯಕನು ಮಾತ್ರ ಅವರನ್ನು ನೋಡಿಬಲ್ಲನು. ಮಲ್ಲಪನಾಯಕನು ತಾನು ಕಣ್ಣಾರೆ ಕಂಡ, ರಾಮನಾಥದೇವರ ಒಂದೊಂದು ಕೆಲಸವನ್ನು ಬಣ್ಣಿಸತೊಡಗಿದನೆಂದರೆ ಆತನ ಮೈಮೇಲೆ ಎಚ್ಚರವಿರುತ್ತಿರ ಲಿಲ್ಲ. ಈ ಮರ್ತ್ಯಭೂಮಿಯಲ್ಲಿ ಇಂತಹ ಪುಣ್ಯವಂತರು ಹುಟ್ಟುವುದು ಅಪರೂಪ. ನಿಜವಾಗಿ ಅವರು ಮನುಷ್ಯರಲ್ಲ, ದೇವರು. ಅದಕ್ಕಾಗಿಯೇ ನಮ್ಮಂಥ ಪಾಪಿಷ್ಠರನ್ನು ಈ ಪ್ರಪಂಚದಲ್ಲಿ ಬಿಟ್ಟು ಅಷ್ಟು ಬೇಗ ಮೇಲಿನ ಪುಣ್ಯಲೋಕಕ್ಕೆ ತೆರಳಿದರು." ಹೀಗೆ ಉಸುರಿ, ಉಸಿರು ಸಿಕ್ಕಂತೆ ಬಿಕ್ಕುತ್ತ ಬೀರನಾಯಕನು ಕಂಬನಿಗರೆದನು.

ಕೆಲ ನಿಮಿಷಗಳು ಸದ್ದಿಲ್ಲದೆ ಉರುಳಿದವು. ಅನಂತರ ಪ್ರಕೃತ ವಿಷಯದತ್ತ ತಿರುಗಿ ಮಾದರಸನು ಮಾತನ್ನು ಮುಂದೂಡಿದನು: "ಬೀರಣ್ಣ, ಇದೀಗ ನಾನು ಹೇಳಿದಂತೆ ನಮ್ಮೂರಲ್ಲಿ ರಾಮನಾಥದೇವರ ಸ್ಮಾರಕವನ್ನು ಸ್ಥಾಪಿಸಬೇಕೆಂದು ಗೊತ್ತುಮಾಡಿದ್ದೇವೆ. ಈ ಕಾರ್ಯದಲ್ಲಿ ನಮಗೆ ನಿನ್ನ ನೆರವು ಬೇಕು."

"ಏನು ಸೇವೆಯನ್ನು ಮಾಡಬೇಕು, ಹೇಳಿರಿ ದೊರೆಗಳೇ! ಶ್ರೀರಾಮ ನಾಥದೇವರಿಗಾಗಿ ಈ ನನ್ನ ಶಿರಸ್ಸು ಬೇಕು ಎಂದು ಹೇಳಿರಿ. ಇದನ್ನು ಈಕ್ಷಣ ಕೊಯ್ದು ತಮ್ಮ ಮುಂದೆ ಇರಿಸುತ್ತೇನೆ." ಇನ್ನೂ ಅದೇ ಆವೇಶದಲ್ಲಿದ್ದ ಬೀರನಾಯಕನು ನುಡಿದನು.

"ಅದು ನಮಗೆ ಗೊತ್ತು, ಬೀರಣ್ಣ! ಅದಕ್ಕಾಗಿಯೇ ನಿನ್ನನ್ನು ಕರೆಸಿದ್ದೇವೆ. ನಾಳಿನ ವಿಜಯಾದಶಮಿಯ ಮಹಾಮುಹೂರ್ತದಲ್ಲಿ ಈ ಸ್ಮಾರಕದ ಸ್ಥಾಪನೆ ಆಗಬೇಕು. ಈ ಸಮಾರಂಭಕ್ಕಾಗಿ ರಾಮನಾಥದೇವರ ಸುಂದರ ಶಿಲಾಪ್ರತಿಮೆಯನ್ನು ಸಿದ್ಧಪಡಿಸಲು ಕಾಗಿನೆಲ್ಲಿಯ ಪ್ರಖ್ಯಾತ ಶಿಲ್ಪಿ ಕಲೋಜನಿಗೆ ಹೇಳಿ ಕಳುಹಿಸಿದ್ದೇವೆ. ಆ ಪ್ರತಿಮೆಯನ್ನು ಸ್ಥಾಪನ ಮಾಡಲು ಒಂದು ದೇವಾಲಯವನ್ನು ಕಟ್ಟುವ ಕೆಲಸವೂ ಪ್ರಾರಂಭ ವಾಗಿದೆ."

"ಬಲು ಚೆನ್ನು, ದೊರೆ! ಬಲು ಚೆನ್ನು" ಬೀರನಾಯಕನು ಕತ್ತನ್ನು ತೂಗಾಡಿಸಿದನು.

"ಈಗ ನೀನು ಮಾಡಬೇಕಾದ ಕೆಲಸವು ಹೀಗೆ. ನಿನ್ನ ಮಗ ಸೋಮನಾಯಕನನ್ನು ಬೆಂಗವಾಲಿಗೆ ಕರೆದುಕೋ. ಈ ನಾಡಿನ ಗ್ರಾಮಗಳಲ್ಲಿ ಸಂಚರಿಸಿ ಈ ವರ್ತಮಾನವನ್ನು ವಿವರವಾಗಿ ವರ್ಣಿಸು. ಒಂದೂರಿನವರು ಮಾತ್ರವಲ್ಲ, ನಾಡಿನ ಜನಗಳೇ ಧನ್ಯರಾಗಬೇಕು; ಎಂಬುದೇ ಇಂತಹ ಸ್ಮಾರಕಗಳನ್ನು ಸ್ಥಾಪಿಸುವುದರ ಪ್ರಯೋಜನವಾಗಿದೆ. ನಮ್ಮ ದೇಶವು ಮಹಾವೀರರ ಜನ್ಮಭೂಮಿ; ನಮ್ಮ ನಾಡು ಮಹಾಸತಿಯರ ನೆಲೆವೀಡು. 'ಕ್ಷಣವಿಧ್ವಂಸಿನಿ ಕಾಯೇ ಕಾ ಚಿಂತಾ ಮರಣೇ ರಣೇ!' ದೇಹವು ಕ್ಷಣಭಂಗುರ; ಸಾವಿಗೇಕೆ ಹೆದುರುವುದು ? ಎಂಬುದು ನಮ್ಮ ನಾಡಿನವರ ಬಿರುದು. ಇಂಥ ಈ ನಾಡಿನಲ್ಲಿ ಇದೀಗ ಹೊಸ ತಲೆಮಾರಿನ ತರುಣರಲ್ಲಿ ಆಲಸ್ಯ ಮತ್ತು ಸುಖಲಾಲಸೆ ಹೆಚ್ಚುತ್ತಿದೆ. ದೈವಭಕ್ತಿ ಕುಗ್ಗುತ್ತಲಿದೆ. ಇಂತಹ ಅನುಚಿತ ಒಲವುಗಳನ್ನು ಹೋಗಲಾಡಿಸಿ ಜನರನ್ನು ರಾಷ್ಟ್ರಕಾರ್ಯಕ್ಕೆ ಅಣಿಗೊಳಿಸಲು ಇಂತಹ ಮಹಾವೀರರ ಸ್ಮಾರಕಗಳೇ ಮದ್ದು." ಮಾದರಸನು ಆಸ್ಥೆಯಿಂದ ಸ್ಮಾರಕಯೋಜನೆಯ ಉದ್ದೇಶವನ್ನು ತಿಳಿಸಿ ಹೇಳಿದನು.

"ನಿಜ, ನಿಜ, ದೊರೆ. ಇಂತಹ ಒಳ್ಳೆಯ ಕೆಲಸವು ನಮ್ಮೂರಲ್ಲಿ ಆಗಲೇಬೇಕು." ಬೀರನಾಯಕನು ಬೆಂಬಲವಿತ್ತನು.

"ಬೀರಣ್ಣ, ಜನತೆಯಲ್ಲಿ ಜಾಗೃತಿಯನ್ನು ಉಂಟುಮಾಡಲು ನಿನ್ನಷ್ಟು ಯೋಗ್ಯರಾದವರು ನಮ್ಮ ಕಣ್ಣಿಗಂತೂ ಬೇರೊಬ್ಬರು ಕಾಣುವುದಿಲ್ಲ."

"ಸಾಕು ಬಿಡಿ, ಒಡೆಯರೇ ! ನಾನೇನೋ ವಯಸ್ಸಾದವನು. ಅದೇಕೆ ಇಂತಹ ಮಾತುಗಳು ?"

"ಹಾಗಲ್ಲ ಬೀರಣ್ಣ. ನಾನು ನಿನ್ನನ್ನು ಹೊಗಳುತ್ತ ಇಲ್ಲ. ನಿಜವಾಗಿ ಕಂಡದ್ದನ್ನೇ ಹೇಳುವೆ. ನೀನು ಮುದುಕನೇನೋ ಹೌದು. ಆದರೆ ನಿನ್ನ ಉತ್ಸಾಹ ಇಂದಿನ ಹರೆಯದವರಲ್ಲಿ ಇಲ್ಲ. ನೀನು ಆಡುವ ಒಂದೊಂದು ಮಾತಿನಲ್ಲಿ, ನೀನು ಬಣ್ಣಿಸುವ ಒಂದೊಂದು ಅನುಭವದಲ್ಲಿ ಎಂತಹ ರಣಹೇಡಿಯನ್ನು ಬಡಿದೆಬ್ಬಿಸುವ ಸ್ಫೂರ್ತಿ ತುಂಬಿಕೊಂಡಿದೆ. ಹಾಗಾದರೆ ಹೊರಡುವೆಯಲ್ಲವೇ, ಬೀರಣ್ಣ ?"

" ಹೊರಟೇಬಿಟ್ಟೆನು, ಒಡೆಯಾ! ಸೋಮನಾಯಕನನ್ನು ಕರೆದುಕೊಂಡು ಈ ನಾಡಿನ ಗ್ರಾಮಗ್ರಾಮಗಳಲ್ಲಿ ಸುತ್ತಿ ಅನೇಕಾನೇಕ ಜನಗಳು ನಾಳಿನ ವಿಜಯಾದಶಮಿಯ ದಿವಸ ಇಲ್ಲಿಗೆ ಬರುವಂತೆ ಮಾಡುತ್ತೇನೆ. ಅಪ್ಪಣೆ ಕೊಡಿ. ಹೋಗಿ ಬರುವೆ. ದೈವದವರೆಲ್ಲರಿಗೂ ಬೀರನ ಪ್ರಣಾಮಗಳು."

ಹೀಗೆ ನುಡಿದು ಬೀರನಾಯಕನು ಅಲ್ಲಿ ಕೂಡಿದ್ದ ಮಹಾಜನರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದನು. ಆಮೇಲೆ ತನ್ನ ಬಡಿಗೆಯನ್ನು ಎತ್ತಿಕೊಂಡು ಹೊರಟುಬಿಟ್ಟನು. ನೆರೆದ ಜನರೆಲ್ಲರು ಜಯಘೋಷ ಮಾಡಿದರು.

" ಜಯ ಭುವನೇಶ್ವರೀ ! ಜಯ ರಾಮನಾಥ ! "

## [ ೨ ]

ಚಂಗಾಪುರದಲ್ಲಿ ರಾಮನಾಥದೇವರ ಸ್ಮಾರಕವು ಸ್ಥಾಪನವಾಗಲಿದೆ ಎಂಬ ವರ್ತಮಾನವು ಊರೂರಲ್ಲಿ ಹಬ್ಬಿತು. ಬೀರನಾಯಕನ ಮುಖದಿಂದ ಅದನ್ನು ಕೇಳಿದ ಜನಗಳಲ್ಲಿ ಒಂದು ವಿಲಕ್ಷಣ ಉತ್ಸಾಹವು ಉಂಟಾಯಿತು. ತಮ್ಮ ಜೀವಮಾನದಲ್ಲಿಯೇ ಅಪೂರ್ವವಾದ ಈ ಸಮಾರಂಭವನ್ನು ನೋಡಬೇಕೆಂಬ ಸಂಭ್ರಮದಿಂದ ನಾನಾ ಭಾಗದ ಜನಗಳು ಈ ಉತ್ಸವಕ್ಕಾಗಿ ಹೊರಡುವ ಸಿದ್ಧತೆ ಮಾಡಿದರು.

ವಿಜಯನಗರ ರಾಜ್ಯದ ಜನಗಳಿಗೆ ಮಹಾನವಮಿ ಬಹಳ ದೊಡ್ಡ ಹಬ್ಬವು. ಅದರಲ್ಲಿ ಈ ಸ್ಮಾರಕದ ಮೂಲಕ ಅದು ಇನ್ನೂ ಮಿಗಿಲಾದ ಹಬ್ಬವಾಯಿತು. ಸ್ಮಾರಕ ಸಮಾರಂಭಕ್ಕಿಂತ ಕೆಲ ದಿನ ಮುಂಚಿತವಾಗಿಯೇ ತಂಡತಂಡವಾಗಿ ಜನಗಳು ಚಂಗಾಪುರದಲ್ಲಿ ಸೇರತೊಡಗಿದರು.

ಈ ಸ್ಮಾರಕದ ಪ್ರಸಂಗದಲ್ಲಿ ನಡೆಯಲಿದ್ದ ಒಂದೆರಡು ವಿಶೇಷ ಸಂಗತಿಗಳಿಂದ ಜನರಲ್ಲಿ ಹೆಚ್ಚಿನ ಹುಮ್ಮಸವೂ ಕುತೂಹಲವೂ ತುಂಬಿಕೊಂಡುವು. ಅವು ಹೀಗೆ. ಹಾವೇರಿಯಲ್ಲಿ ಒಂದು ಪ್ರಖ್ಯಾತ ಯೋಗಾಶ್ರಮವಿದ್ದು, ಅದರ ಸಂಚಾಲಕರಾದ ಶ್ರೀ ಮೃತ್ಯುಂಜಯ ಶಿವಯೋಗಿಗಳು ಅತ್ಯಂತ ತಪಸ್ವಿಗಳು

ಮತ್ತು ಜ್ಞಾನಿಗಳೆಂದು ಹೆಸರು ಪಡೆದಿದ್ದರು. ಮಿತಭಾಷಿಗಳಾಗಿದ್ದ ಇವರ ಮುಖದಿಂದ ಹೊರಹೊಮ್ಮುವ ಮಾತಿನಲ್ಲಿ ಒಮ್ಮೊಮ್ಮೆ ಮುಂದಾಗುವ ಭವಿಷ್ಯದ ಸೂಚನೆ ಇರುತ್ತಿತ್ತು. ಈ ಶಿವಯೋಗಿಗಳು ಸ್ಮಾರಕ ಸಮಾರಂಭ ವನ್ನು ನೆರವೇರಿಸುವರೆಂದು ವಿದಿತವಾಗಿತ್ತು. ಇಂತಹ ಶಿವಯೋಗಿಗಳ ದರ್ಶನವನ್ನು ಪಡೆಯುವುದು ಒಂದು ಭಾಗ್ಯವೇ ಸೈ.

ಇದಲ್ಲದೆ ಈ ಸ್ಮಾರಕ ಸಮಾರಂಭದಲ್ಲಿ ಒಂದು ಪ್ರಸಿದ್ಧ ಗೊಂದಲವು ನಡೆಯಲಿದ್ದಿತು. ಈ ಗೊಂದಲ ಮಾಡುವವನು ಸಿಂದನಾಡಿನ 'ಸಣಸುವರ ಶಾರ್ದೂಲ' ಶಿವದಾಸ ಜಕ್ಕಿನಾಯಕ. ಶಿವದಾಸ ಜಕ್ಕಿನಾಯಕನು ಶ್ರೇಷ್ಠ ಗೊಂದಲಿಗನೆಂದು ಕೀರ್ತಿ ಗಳಿಸಿದ್ದನು. ಸುಮಧುರವಾದ ಆತನ ವಾಣಿಯಿಂದ ಹರಿದು ಬರುವ ಆಖ್ಯಾನ ಕಥೆಯನ್ನು ಕೇಳುವುದೆಂದರೆ ಶ್ರೋತೃಗಳಿಗೆ ಅದೊಂದು ಹಬ್ಬವೆನಿಸುತ್ತಿತ್ತು. ಈ ಜಕ್ಕಿನಾಯಕನು ಸ್ಮಾರಕ ಸಮಾರಂಭದ ರಾತ್ರಿಯಲ್ಲಿ ಕುಮಾರ ರಾಮನಾಥನ ಕಥೆಯನ್ನು ನಿರೂಪಿಸತಕ್ಕವನಾಗಿದ್ದನು. ಜಕ್ಕಿನಾಯಕನ ಕೀರ್ತಿಯನ್ನು ಈ ಭಾಗದ ಜನರು ಕೇಳಿದವರಾಗಿದ್ದರೂ ಈ ಮುಂಚೆ ಆತನ ಕಥಾಲಾಪವನ್ನು ಶ್ರವಣ ಮಾಡುವ ಸುಯೋಗವು ಅವರಿಗೆ ಬಂದಿರಲಿಲ್ಲ. ಆದುದರಿಂದ ಇದೊಂದು ಅಪೂರ್ವ ಸಂಧಿಯೆಂದು ಅವರು ಬಗೆದರೆ ಅಚ್ಚರಿಯಲ್ಲ.

ಸ್ಮಾರಕಕ್ಕಾಗಿ ಒಂದು ಶಿಲಾಪ್ರತಿಮೆ ಸಿದ್ಧವಾಗಿತ್ತು. ಹಾರಿಕೆ ಯಲ್ಲಿದ್ದ ಭವ್ಯವಾದ ಕುದುರೆಯಮೇಲೆ ಆರೋಹಣ ಮಾಡಿದ ಒಬ್ಬ ವೀರನು. ಆತನು ಬಲಗೈಯಲ್ಲಿ ಕೂರಾದ ಉದ್ದನೆಯ ಬರ್ಚಿಯನ್ನು ಮೇಲಕ್ಕೆ ಎತ್ತಿ ಹಿಡಿದಿದ್ದನು. ಎಡಗೈ ಕುದುರೆಯ ಕಡಿವಾಣವನ್ನು ಎಳೆಯುತ್ತಿದ್ದಿತು. ಎಡಗಡೆಯಲ್ಲಿ ಸೊಂಟಕ್ಕೆ ಕಟ್ಟಿದ ಕಠಾರಿ ನೇತಾಡುತ್ತಿತ್ತು. ಉಜ್ವಲ ಪ್ರಭಾವಲಯವು ವೀರನ ಮುಖವನ್ನು ಆವರಿಸಿತ್ತು. ಈತನೇ ಕುಮಾರ ರಾಮನಾಥ ! ಈ ವಿಗ್ರಹಕ್ಕಾಗಿ ಊರ ಹೊರಗೆ ಬಹಳ ದೊಡ್ಡದಲ್ಲವಾದರೂ ಮನೋಹರವಾದ ಒಂದು ದೇವಾಲಯವನ್ನು ಕಟ್ಟಿಸಿದ್ದರು. ಈ ದೇವಾ ಲಯದ ಗರ್ಭಗುಡಿಯಲ್ಲಿ ಈ ಪ್ರತಿಮೆ ಸ್ಥಾಪನವಾಗಬೇಕಾಗಿದ್ದಿತು.

ದೇವಾಲಯದ ಮುಂದುಗಡೆ ವಿಶಾಲವಾದ ತಾತ್ಪೂರ್ತಿಕ ಮಂಟಪ ವನ್ನು ನಿಲ್ಲಿಸಿದ್ದರು. ಈ ಮಂಟಪದ ಮಧ್ಯದಲ್ಲಿ ಎತ್ತರವಾದ ಒಂದು ಜಗಲಿ. ಇದರಮೇಲೆ ಜನಗಳು ನೋಡಲೆಂದು ಕುಮಾರ ರಾಮನಾಥನ ವಿಗ್ರಹವನ್ನು ಇರಿಸಿದ್ದರು. ಈ ವಿಗ್ರಹವನ್ನು ನೋಡಲು ಜನಗಳು ತೆರ ಪಿಲ್ಲದೆ ಬರತೊಡಗಿದರು. ಬಂದವರು ಆ ಪ್ರತಿಮೆಗೆ ಪೂಜೆ ಪುರಸ್ಕಾರ ಗಳನ್ನು ಸಲ್ಲಿಸತೊಡಗಿದರು. ಅರಿಷಿಣ ಕುಂಕುಮವನ್ನು ಏರಿಸುವವರು ಕೆಲರು. ಹೂಮಾಲೆಯನ್ನು ಮುಡಿಸುವವರು ಕೆಲರು. ಹಣ್ಣುಕಾಯಿ ಮಾಡುವವರು ಕೆಲರು. ಹಾಡು, ಭಜನೆ, ಕೀರ್ತನೆ, ಮೇಳಗಳನ್ನು ನಡೆಸುವವರು ಕೆಲರು. ಹೀಗೆ ನಿಜ ಉತ್ಸವಕ್ಕೆ ಮೊದಲು ಅದೊಂದು ದೊಡ್ಡ ಜಾತ್ರೆಯೇ ಅಲ್ಲಿ ನೆರೆದಂತಾಯಿತು.

ಇಂದು ವಿಜಯಾದಶಮಿ. ಚಂಗಾಪುರ ಗ್ರಾಮದ ಹೊರಬಯಲಲ್ಲಿ ಹೊಸದಾಗಿ ನಿರ್ಮಿತವಾದ ದೇವಾಲಯದ ಸುತ್ತಲು ಅಪಾರ ಜನಸಂದಣಿ ಕೂಡಿದೆ. ಹಾವೇರಿಯ ಯೋಗಾಶ್ರಮದ ಮೃತ್ಯುಂಜಯ ಶಿವಯೋಗಿಗಳು ಆಗಮಿಸಿದರು. ದರ್ಶನಕ್ಕಾಗಿ ಕಾದಿದ್ದ ಸಾವಿರಾರು ಜನಗಳಿಗೆ ದರ್ಶನ ಲಾಭವನ್ನಿತ್ತರು. ಸುಮುಹೂರ್ತವು ಬರಲು ತಮ್ಮ ಅಮೃತಹಸ್ತದಿಂದ ದೇವಾಲಯದಲ್ಲಿ ಕುಮಾರ ರಾಮನಾಥ ಪ್ರತಿಮೆಯ ಪ್ರಾಣಪ್ರತಿಷ್ಠೆ ಮಾಡಿ ದರು. ಅನ್ನ ಸಂತರ್ಪಣೆ ಮೊದಲಾದ ಕಾರ್ಯಗಳು ಮುಂದುವರಿದುವು.

ರಾತ್ರಿಯ ಮೊದಲ ಜಾವವು ಕಳೆಯಲು ಗೊಂದಲದ ಕಾರ್ಯಕ್ರಮವು ಪ್ರಾರಂಭವಾಯಿತು. ದೇವಾಲಯದ ಮುಂದಿನ ಎತ್ತರದ ಕಟ್ಟೆಯ ಮೇಲೆ ಶಿವಯೋಗಿಗಳು ವಿರಾಜಮಾನರಾದರು. ಸ್ವಲ್ಪ ಅಂತರದಲ್ಲಿ 'ಸೆಣಸುವರ ಶಾರ್ದೂಲ' ಶಿವದಾಸ ಜಕ್ಕಿನಾಯಕನು ತನ್ನ ಮೇಳದವರೊಂದಿಗೆ ಉಪಸ್ಥಿತ ನಾಗಿದ್ದನು. ಆತನ ಮೇಳದಲ್ಲಿ ಹಾಡುಗಾರ, ತಾಳದವ, ಮದ್ದಳೆಯವ, ಶ್ರುತಿಗಾರ ಮತ್ತು ಕಥಾಸಹಾಯಕ ಇಷ್ಟು ಜನರು ಇದ್ದರು. ಇವರಿಂದ ಆತನ ಕಥಾನಿರೂಪಣೆಗೆ ಬಣ್ಣವೇರುತ್ತಿತ್ತು. ಕಥಾಸಹಾಯಕನು ನಡುನಡುವೆ ಜಕ್ಕಿನಾಯಕನು ಕೇಳುವ ಪ್ರಶ್ನಗಳಿಗೆ ಉತ್ತರವನ್ನು ಹೇಳುತ್ತ, ಒಮ್ಮೊಮ್ಮೆ

ಆತನ ವಾಕ್ಯಗಳನ್ನೇ ತಿರುಗಿ ಉಚ್ಚಾರ ಮಾಡುತ್ತ ಶ್ರೋತೃಗಳ ಅವಧಾನವನ್ನೂ ಅಭಿರುಚಿಯನ್ನೂ ಜಾಗೃತವಾಗಿರಿಸುತ್ತಿದ್ದನು.

ಗೊಂದಲದ ಪ್ರಾರಂಭದಲ್ಲಿ ಮೃತ್ಯುಂಜಯ ಶಿವಯೋಗಿಗಳು ಪರಿಚಯ ರೂಪವಾಗಿ ಗಂಭೀರವಾಣಿಯಿಂದ ನಾಲ್ಕು ಮಾತುಗಳನ್ನು ಹೇಳಿದರು :

" ಈ ದಿನದ ಮೇಲ್ಮೆಯನ್ನು ಹೆಚ್ಚಾಗಿ ವಿವರಿಸುವ ಅಗತ್ಯವಿಲ್ಲ. ಇದು ಕುಮಾರ ರಾಮನಾಥರ ಸ್ಮೃತಿಗೆ ಮೀಸಲಾದ ಅತ್ಯಂತ ಪವಿತ್ರ ದಿವಸ. ದೇವತ್ವವನ್ನು ಹೊಂದಿ ದೇವಾಲಯದಲ್ಲಿ ಪ್ರತಿಷ್ಠಿತರಾಗುವ ಭಾಗ್ಯವನ್ನು ಪಡೆದ ಕುಮಾರ ರಾಮನಾಥರ ಮಹಿಮೆಯನ್ನು ಏನೆಂದು ಬಣ್ಣಿಸುವುದು? ಈ ಪರಿಯ ಭಾಗ್ಯವು ಈ ಮರ್ತ್ಯಲೋಕದ ಕೆಲವು ಜೀವಿಗಳಿಗೆ ಮಾತ್ರ ದೊರೆಯುವುದು. ಕುಮಾರ ರಾಮನಾಥರು ನಮ್ಮಂತೆ ಮನುಷ್ಯರಾಗಿಯೇ ಜನಿಸಿದರು. ಆದರೆ ಅವರ ಒಂದೊಂದು ಕೃತಿ, ಒಂದೊಂದು ಗುಣ, ಅಮಾನುಷತೆಯಿಂದ ಕೂಡಿದ್ದು ಅವರ ದಿವ್ಯ ಜೀವನವನ್ನೂ ಭವ್ಯ ಬಾಳನ್ನೂ ಎತ್ತಿ ತೋರಿಸುತ್ತವೆ.

" ಕುಮಾರ ರಾಮನಾಥರ ತಂದೆ ಕಂಪಿಲರಾಯ. ಈ ಪಿತಾಪುತ್ರರು ಹೊಸಮಲೆ ಎಂಬ ಚಿಕ್ಕ ರಾಜ್ಯದ ದೊರೆಗಳು. ಕುಮ್ಮಟದುರ್ಗವು ಇವರ ಭದ್ರಸ್ಥಳ. ಈ ರಾಜ್ಯವು ತುಂಗಭದ್ರಾ ನದಿಯ ನೆರೆಯಲ್ಲಿ ಆನೆಗುಂದಿಯಿಂದ ಸ್ವಲ್ಪ ದೂರದಲ್ಲಿ ಹಬ್ಬಿದ್ದಿತು. ದಕ್ಷಿಣ ಭಾರತವನ್ನು ಪಾದಾಕ್ರಾಂತ ಮಾಡಲು ಹೊರಟ ಮುಸಲ್ಮಾನ ಅರಸರಿಗೆ ಈ ರಾಜ್ಯದಿಂದ ಆತಂಕವಾಗುತ್ತಿದ್ದಿತು. ಅದಕ್ಕಾಗಿ ಅವರು ಈ ರಾಜ್ಯದ ಮೇಲೆ ಹಲವು ಬಾರಿ ಏರಾಟ ಮಾಡಿದರು. ಈ ಏರಾಟಗಳನ್ನು ಇದಿರಿಸುತ್ತ ಕಂಪಿಲರಾಯ ಮತ್ತು ಕುಮಾರ ರಾಮನಾಥರು ತಮ್ಮ ಪ್ರಾಣಗಳನ್ನು ಅರ್ಪಿಸಿದರು. ಇವರ ನಿರ್ಧಾರವನ್ನೇ ಎತ್ತಿ ಹಿಡಿದ ಹರಿಹರ ಬುಕ್ಕರಾಯರು ಮಹಮ್ಮದೀಯರ ಆಕ್ರಮಣವನ್ನು ತಡೆದು ನಿಲ್ಲಿಸಿ ವಿಜಯನಗರ ರಾಜ್ಯವನ್ನು ಸಂಸ್ಥಾಪಿಸಿದರು. ಈ ಮೇರೆಗೆ ಸ್ವದೇಶ ಮತ್ತು ಸ್ವಧರ್ಮ ಇವುಗಳ ಸಂರಕ್ಷಣೆಗಾಗಿ ಮಡಿದ ಈ ಹುತಾತ್ಮರು ವಿಜಯನಗರದ ಸಂಸ್ಥಾಪಕರಾದ ಹರಿಹರ ಬುಕ್ಕರಾಯರಂತೆ ವಂದನೀಯರೂ ಅಭಿನಂದನೀಯರೂ ಆಗಿದ್ದಾರೆ.

“ ಮನಸ್ಸನ್ನು ಗೆಲ್ಲುವುದು ವೀರರ ಒಂದು ಮುಖ್ಯ ಗುಣ. ಇದು ಕುಮಾರ ರಾಮನಾಥರಲ್ಲಿ ಒಪ್ಪುತ್ತಿದ್ದಿತು. ಅಂತೆಯೇ ಅವರು ಪರದಾರ ಸೋದರ ಎಂಬ ವಿಶಿಷ್ಟ ಬಿರುದಿನಿಂದ ಖ್ಯಾತರಾಗಿದ್ದಾರೆ. ಕುಮಾರ ರಾಮನಾಥರ ಜೀವನದ ತಿರುಳನ್ನು ಒಂದು ಮಾತಿನಲ್ಲಿ ಸೂಚಿಸಬಹುದು. ಅದು ಆತ್ಮಾರ್ಪಣ. ಕರ್ತವ್ಯಪಾಲನೆಯಲ್ಲಿ ಸರ್ವಸ್ವವನ್ನು ಧಾರೆಯೆರೆಯಲು ಅವರು ಹಿಂದುಮುಂದು ನೋಡುತ್ತಿರಲಿಲ್ಲ.

“ ಇಂತಹ ಪುಣ್ಯಚರಿತರ ರೋಮಾಂಚಕಾರಕ ಜೀವನವೃತ್ತಾಂತವನ್ನು ಕೇಳಲು ತಾವೆಲ್ಲರು ಉತ್ಕಂಠಿತರಾಗಿದ್ದೀರಿ. ಇದನ್ನು ನಿರೂಪಿಸಲು ಸಿಂದ ನಾಡಿನಿಂದ ಬಂದ, ‘ ಸೆಣಸುವರ ಶಾರ್ದೂಲ ’ ಶಿವದಾಸ ಜಕ್ಕಿನಾಯಕರು ಸಿದ್ಧರಾಗಿದ್ದಾರೆ. ಅವರ ರಸನತ್ವಾದ ಕಥನಶೈಲಿ ತಮ್ಮೆಲ್ಲರನ್ನು ತಣಿಸದೆ ಇರದು. ಇಷ್ಟೇ ಸಾಕು. ಶಿವಾಯ ನಮಃ । ”

## [ ೩ ]

ಶಿವದಾಸ ಜಕ್ಕಿನಾಯಕನು ಎದ್ದುನಿಂತನು. ಶಿವಯೋಗಿಗಳಿಗೂ ಸಮಸ್ತ ಜನಗಳಿಗೂ ವಂದನೆಗಳನ್ನು ಅರ್ಪಿಸಿದನು. ನಿರೂಪಣೆಯನ್ನು ಪ್ರಾರಂಭಿಸುತ್ತ ಮಂಗಲಾಚರಣ ಮಾಡಿದನು.

ಮಂಗಲಾಚರಣವು ದೇವತಾಸ್ತುತಿಗೆ ಮೀಸಲಾಗಿತ್ತು. ಮೊದಲು ವಿಘ್ನೇಶ್ವರನಾದ ಬಾದಾಮಿಯ ಗಣಪತಿಯನ್ನು ವಂದಿಸಿದನು. ಅನಂತರ ತನ್ನ ಇಷ್ಟದೇವತೆಯನ್ನು, ಸಿಂದನಾಡಿನ ಪ್ರಖ್ಯಾತ ಪಟ್ಟಣವಾದ ಕುಕ್ಕನೂರಿನ ಮಹಾಮಾಯೆಯನ್ನು ಸ್ತೋತ್ರ ಮಾಡಿದನು. ಆ ಸ್ತೋತ್ರವು ಹೀಗೆ :

ಜಯ ಜಯ ಜಗದಂಬೆ ।
ಲಾಲಿತ ಭಕ್ತ ಕದಂಬೆ ।
ಸಮಸ್ತ ಭುವನಾಲಂಬೆ ।
ಮಹಿಮೆಯನೇನಂಬೆ ॥

ಅನಂತರ ಉಮಾಮಹೇಶ್ವರ, ವೀರನಾರಾಯಣ, ಮಲ್ಲಿಕಾರ್ಜುನ, ಕೊಲ್ಲಾಪುರದ ಮಹಾಲಕ್ಷ್ಮಿ, ಉಗರಗೊಳ್ಳದ ಎಲ್ಲಮ್ಮ, ಮೈಸೂರಿನ ಚಾಮುಂಡಿ, ಬನಶಂಕರಿ, ಆಂಜನೇಯ, ಕುಮಾರ ರಾಮನಾಥನ ಕುಲದೇವ ನಾದ ಜಟಿಂಗ ರಾಮೇಶ್ವರ, ಮೊದಲಾದ ಕರ್ನಾಟಕದ ಖ್ಯಾತಿವೆತ್ತ ದೇವರು ಗಳನ್ನು ಕೀರ್ತಿಸಿದನು. ಬಳಿಕ ಕರ್ನಾಟಕದ ಮತಸ್ಥಾಪಕರನ್ನು ಮತ್ತು ಸತ್ಪುರುಷರನ್ನು ಸ್ಮರಿಸಿದನು. ಮಯೂರವರ್ಮನೇ ಮೊದಲಾದ ವೀರ ವಿಭೂತಿಗಳನ್ನು ಪ್ರಶಂಸಿಸಿದನು. ಕೊನೆಯಲ್ಲಿ ಇಂತಹ ಮಹಾರತ್ನಗಳ ಖಣಿಯಾದ ಕರ್ನಾಟಕದ ಜನನಿಯನ್ನು ವರ್ಣಿಸಿದನು.

ಈ ಒಂದೊಂದು ಸ್ತೋತ್ರವು ಮುಗಿದ ಕೂಡಲೆ ಜಕ್ಕಿನಾಯಕನ ಮೇಳದವರು

ಉಘೋ ಉಘೋ ಗಜಾನನಾ । ಶರಣು ಶರಣು ॥
ಉಘೋ ಉಘೋ ಜಗದಂಬೆ । ಶರಣು ಶರಣು ॥
ಉಘೋ ಉಘೋ ವೀರನಾರಾಯಣಾ । ಶರಣು ಶರಣು ॥
ಉಘೋ ಉಘೋ ಮಹಾಲಕ್ಷ್ಮೀ । ಶರಣು ಶರಣು ॥

ಮುಂತಾಗಿ ಏಕಕಂಠದಿಂದ ಗರ್ಜನೆ ಮಾಡುವರು.

ಈ ಮಂಗಲಾಚರಣವು ಶ್ರೋತೃಗಳ ಮೇಲೆ ಸುಪರಿಣಾಮವನ್ನು ಉಂಟುಮಾಡಿತು. ಅವರ ಮನಸ್ಸುಗಳು ಶುಭಭಾವನೆಗಳಿಂದ ತುಂಬಿ ಪವಿತ್ರ ವಾತಾವರಣದಲ್ಲಿ ಅಲೆದಾಡತೊಡಗಿದವು.

ಮುಂದೆ ಒಂದು ನಿಮಿಷ ಮೌನವಾಗಿತ್ತು.

ಆಮೇಲೆ "ಕೇಳಿರಣ್ಣ ಕೇಳಿ! ಕೈಲಾಸದ ಕಥೆಯನು ಕೇಳಿ!" ಎಂಬ ಉದ್ಗಾರವು ಜಕ್ಕಿನಾಯಕನ ಮುಖದಿಂದ ಹೊರಬಿದ್ದಿತು. ಅದು ಹಠಾತ್ತಾಗಿ ಎಲ್ಲರ ಲಕ್ಷ್ಯವನ್ನು ಸೆಳೆದುಕೊಂಡಿತು. ಜಕ್ಕಿನಾಯಕನು ಕಥೆಯನ್ನು ಪ್ರಾರಂಭಿಸಿದನು. ಅದು ಹೀಗೆ:

ಕೈಲಾಸದಲ್ಲಿ ಭಗವಾನ್ ಶಂಕರರು ತಪಸ್ಸಿನಲ್ಲಿ ಮಗ್ನರಾಗಿದ್ದಾರೆ. ಧ್ಯಾನಸಮಾಧಿಯಲ್ಲಿ ಕುಳಿತುಬಿಟ್ಟಿದ್ದಾರೆ. ಪಕ್ಕದಲ್ಲಿ ಮಹಾತಾಯಿ ಪಾರ್ವತೀದೇವಿ ಅವರನ್ನು ಎಚ್ಚರಿಸಲು ಪ್ರಾರ್ಥನೆ ಮಾಡುತ್ತಿದ್ದಾಳೆ.

" ದೇವದೇವಾ ! ಕರುಣೆಯನ್ನು ತೋರಿರಿ; ಕೃಪಾಕಟಾಕ್ಷವನ್ನು ಬೀರಿರಿ. ಭೂಲೋಕದಲ್ಲಿ ನಮ್ಮ ಪ್ರಿಯ ಕನ್ನಡ ನಾಡಿನ ಜನಗಳು ಬಹಳ ಕಷ್ಟದಲ್ಲಿದ್ದಾರೆ. ಯವನರ ಉಪಟಳ ಹೆಚ್ಚಾಗಿದೆ. ಪರಕೀಯರ ಹಾವಳಿ ಯಿಂದ ಜನರ ಜೀವನವು ಅನಿಶ್ಚಿತವಾಗಿದೆ. ಯವನರು ದಾಳಿಮಾಡಿ ನಮ್ಮ ವರ ಧನಕನಕಗಳನ್ನು ಅಪಹರಿಸುತ್ತಿದ್ದಾರೆ. ಮಹಿಳೆಯರ ಮಾನವನ್ನು ಕಳೆಯುತ್ತಿದ್ದಾರೆ. ದೇವಾಲಯಗಳನ್ನು ವಿಧ್ವಂಸಗೊಳಿಸುತ್ತಿದ್ದಾರೆ. ಗೋವಧೆ ನಡೆಯುತ್ತಿದೆ. ಧರ್ಮವು ಕುಗ್ಗುತ್ತಿದೆ. ಅಧರ್ಮವು ಹಿಗ್ಗುತ್ತಿದೆ. ಈ ಗೋಳಾಟವನ್ನು ಸಹಿಸಲಾರದೆ ಜನಗಳು ನಮಗೆ ಮೊರೆಯಿಡುತ್ತಿದ್ದಾರೆ. ಪ್ರಭೋ ! ಕಣ್ದೆರೆಯಿರಿ. "

ಪಾರ್ವತಿಯ ಈ ಆರ್ತನಾದವನ್ನು ಕೇಳಿ ಶ್ರೀಶಂಕರರು ಎತ್ತರವಾಗಿ ಕಣ್ಣನ್ನು ತೆರೆದರು. " ಪ್ರಿಯೆ ! ಏನು ಸಂಕಟ ? ಇಷ್ಟೇಕೆ ಗೋಳಿಡುವೆ ? " ಎಂದು ಕೇಳಿದರು.

ಪಾರ್ವತಿ ಅರಿಕೆ ಮಾಡಿದಳು: " ದೇವಾ ! ತಮಗೆ ಅರಿಯದುದು ಏನಿದೆ ? ಯವನರ ಆಕ್ರಮಣದಿಂದ ಕರ್ನಾಟಕದಲ್ಲಿ ಎದ್ದಿರುವ ಹಾಹಾ ಕಾರದ ಸಮಾಚಾರವನ್ನು ನಾನು ತಮಗೆ ಪ್ರತ್ಯೇಕವಾಗಿ ಅರಿಕೆಮಾಡ ಬೇಕೆ ? "

ಈ ವಾಕ್ಯವನ್ನು ಕೇಳಿ ಭಗವಾನ್ ಶಂಕರರು ಒಂದು ನಿಮಿಷ ಧ್ಯಾನಸ್ಥ ರಾದರು. ಮತ್ತೆ ಕಣ್ಣು ತೆರೆದು ಕೇಳಿದರು. " ಹಾಗಾದರೆ ಏನು ಮಾಡ ಬೇಕೆನ್ನುವೆ ? ಹೇಳು ಪ್ರಿಯೆ ! "

" ನಾನೇನು ಹೇಳಲಿ, ದೇವಾ ! ತಾವು ಸತ್ಯಸಂಕಲ್ಪರು, ಸರ್ವ ಸಮರ್ಥರು. " ಪಾರ್ವತಿ ನಮ್ರತೆಯಿಂದ ಸೂಚಿಸಿದಳು.

" ಹಾಗಾದರೆ ಕುಮಾರನನ್ನು ಕರೆಸು, ಪ್ರಿಯೆ ! " ಶಂಕರರು ಅಪ್ಪಣೆ ಕೊಡಿಸಿದರು. ಶಂಕರರ ಅಪ್ಪಣೆಯಂತೆ ಕಾರ್ತಿಕೇಯನು ಅಲ್ಲಿಗೆ ಬಂದು ಬಿಟ್ಟನು. " ಏನಪ್ಪಣೆ, ದೇವಾ ! " ಎಂದು ಕೈಜೋಡಿಸಿ ವಿಜ್ಞಾಪಿಸಿದನು.

"ಏನೂ ಇಲ್ಲ, ಕುಮಾರಾ! ನಮ್ಮ ಪ್ರಿಯ ಕನ್ನಡ ನಾಡಿನಲ್ಲಿ ಯುವನರ ಉಪಟಳವು ಹೆಚ್ಚಾಗಿದೆ. ಆದಕ್ಕಾಗಿ ನೀನು ಆ ಭೂಮಿಯಲ್ಲಿ ಅವತಾರಮಾಡಿ ನಮ್ಮ ಜನಗಳ ಕಷ್ಟಗಳನ್ನು ಕಡಿಮೆ ಮಾಡಿದರೆ ಒಳ್ಳೆಯದು." ಶಂಕರರು ಸೂಚಿಸಿದರು.

ಕುಮಾರನು ಮಾತನಾಡಲಿಲ್ಲ. ವಿಚಾರಮಗ್ನನಾದಂತೆ ತೋರಿದನು. ಶಂಕರರು ಕೇಳಿದರು: "ಏಕೆ ಕುಮಾರ! ಅನುಮಾನಿಸುವೆ? ಅದಾವ ಯೋಚನೆ ನಿನಗೆ?"

ಕುಮಾರನು ಕೆಲ ನಿಮಿಷ ಮೌನವಾಗಿದ್ದು ವಿನಯದಿಂದ ಪ್ರಾರ್ಥಿಸಿದನು: "ದೇವಾ! ತಮಗೆ ನಾನೇನು ಹೇಳಲಿ? ಮರ್ತ್ಯಲೋಕದಲ್ಲಿ ಹುಟ್ಟುವುದೆಂದರೆ ಯಾರಿಗೂ ಕಷ್ಟವೇ. ಕಷ್ಟವನ್ನು ಯಾರು ಬಯಸುವರು?"

"ಕುಮಾರ! ನಾನೇನು ಹೇಳಲಿ ನಿನಗೆ? ದೇವತೆಗಳಾದ ನಮ್ಮ ಬಾಳು ಲೋಕದ ಜೀವಿಗಳ ಸುಖಕ್ಕಾಗಿ ಅಲ್ಲವೆ? ಕಷ್ಟವೆಂದು ಕರ್ತವ್ಯದಲ್ಲಿ ನಮ್ಮಂತಹರು ಹಿಂಜರಿದರೆ ಬಡ ಜೀವಿಗಳಿಗೆ ಗತಿ ಯಾವುದು?" ಶಂಕರರು ತಿಳಿಸಿ ಹೇಳಿದರು.

"ಆಗಲಿ ದೇವಾ! ತಮ್ಮ ಅಪ್ಪಣೆಯನ್ನು ಪಾಲಿಸುವೆ." ಕಾರ್ತಿಕೇಯನು ಗೌರವವಾಗಿ ನುಡಿದನು.

"ಕುಮಾರಾ! ನಿನ್ನ ಇಂಗಿತವು ಗೊತ್ತಾಗಿದೆ. ಅದಕ್ಕಾಗಿಯೇ ನಾನು ಹೀಗೆ ವಿಚಾರ ಮಾಡಿರುವೆ. ನೀನು ಮಾನವ ಲೋಕದಲ್ಲಿ ಜನ್ಮ ತಾಳು. ಆದರೆ ಅಲ್ಲಿ ಬಹುಕಾಲ ಬಾಳಬೇಡ. ಹಿಂದೆ ದ್ವಾಪರ ಯುಗದಲ್ಲಿಯ ಅಭಿಮನ್ಯುವಿನಂತೆ ನೀನು ಎಳೆಹರೆಯದಲ್ಲಿಯೆ ಉತ್ತಮ ಗುಣಗಳನ್ನು ಬೆಳಗಿಸಿ ಪರಾಕ್ರಮವನ್ನು ಮೆರೆಯಿಸಿ ನಿನ್ನ ಜೀವನಯಾತ್ರೆಯನ್ನು ಮುಗಿಸಿ ಬೇಗನೆ ನಮ್ಮ ಬಳಿಗೆ ಬಂದುಬಿಡು. ಆಯಿತೆ?" ಶಂಕರರು ಸಮಾಧಾನ ಹೇಳಿದರು.

“ ಆಗಬಹುದು ದೇವಾ ! ಆದರೆ ಸ್ಥಳ ಯಾವುದು ? ಎಂತಹ ಪರಿವಾರ ? ” ಕುಮಾರನು ಕುತೂಹಲದಿಂದ ಕೇಳಿದನು.

“ ಹಿಂದಿನದರ ಪುನರಾವೃತ್ತಿ, ಒಂದು ವಿಧದಿಂದ. ಪೂರ್ವಜನ್ಮದಲ್ಲಿಯ ಆ ನಿನ್ನ ತಂದೆಯೇ ಈ ಜನ್ಮದಲ್ಲಿಯೂ ನಿನ್ನ ಪಿತ. ಆತನೇ ಕಂಪಿಲರಾಯ. ಆತನ ಪತ್ನಿ ಹರಿಹರದೇವಿ. ಆ ಮಹಾಸತಿಯ ಪವಿತ್ರ ಉದರದಲ್ಲಿ ನೀನು ಪ್ರವೇಶ ಮಾಡು. ಪಾವನತಮ ಪಂಪಾಕ್ಷೇತ್ರದ ನೆರೆಯು ಪ್ರವೇಶವು ನಿನ್ನ ಅವತಾರಸ್ಥಳ. ” ಶಂಕರರು ಒಡಪನ್ನು ಬಿಚ್ಚಿ ಹೇಳಿದರು.

“ ಮಾತೆ ! ನಿನಗೆ ಸಾಷ್ಟಾಂಗ; ಪಿತರೆ ! ನಿಮಗೆ ಪ್ರಣಾಮಗಳು. ” ಎಂದು ಪಾರ್ವತೀ ಪರಮೇಶ್ವರರಿಗೆ ವಂದನಮಾಡಿ ಕಾರ್ತಿಕೇಯನು ಹೊರಟುಹೋದನು.

ಶಿವದಾಸ ಜಕ್ಕಿನಾಯಕನು ಕೈಲಾಸದಲ್ಲಿಯ ಈ ಸಂನಿವೇಶವನ್ನು ರಸಭರಿತವಾಗಿ ಅಭಿನಯದೊಂದಿಗೆ ವರ್ಣಿಸಿದನು. ಅದನ್ನು ಕೇಳುವ ಸಭಿಕರಿಗೆ ಕೈಲಾಸದ ದೃಶ್ಯವು ಪ್ರತ್ಯಕ್ಷವಾಗಿ ಕಣ್ಣ ಮುಂದೆ ನಡೆದಂತೆ ಭಾಸವಾಯಿತು. ಗಂಭೀರವಾಗಿ ಪದ್ಮಾಸನದಲ್ಲಿ ಕುಳಿತಿದ್ದ ಶಿವಯೋಗಿಗಳನ್ನು ನೋಡುತ್ತ ನೋಡುತ್ತ ಕೆಲ ಭಾವಿಕರು ಇವರೇ ಶ್ರೀಶಂಕರರೆಂದು ನೆನೆದು ಮೈಮರೆತರು. ಈ ಹೊತ್ತಿಗೆ ಜಕ್ಕಿನಾಯಕನು ಪುನಃ ಗದ್ದರಿಸಿದನು. ಆತನ ಗುಡುಗು ಕಿವಿಗೆ ಬಿದ್ದ ಕೂಡಲೆ ಆ ಭಾವಿಕರು ಕನಸಿನಿಂದ ಎಚ್ಚತ್ತು ಕಣ್ಣು ಬಿಟ್ಟಂತೆ ಸತ್ಯ ಸೃಷ್ಟಿಗೆ ಬಂದವರಾದರು.

“ ಆಲಿಸಿರಿ ಮಹಾಜನಗಳೇ ! ಆಲಿಸಿರಿ ಆಲಿಸಿರಿ ಮುಂದಿನ ಸೋಜಿಗದ ವೃತ್ತಾಂತವನ್ನು. ” ಎಂಬೀ ಜಕ್ಕಿನಾಯಕನ ನೇರವಾದ ನುಡಿಗಳು ಜನಗಳನ್ನು ಬಡಿದೆಬ್ಬಿಸಿದಂತೆ ಮಾಡಿ ಅವರ ಉತ್ಕಂಠೆಯನ್ನು ಹೆದನಗೊಳಿಸಿದವು. ನಾಯಕನು ಕಥೆಯನ್ನು ಮುಂದುವರಿಸಿದನು. ಅದು ಹೀಗೆ.

ಗಂಗಾಸ್ನಾನಂ ತುಂಗಾಪಾನಂ ! ಎಂದು ಹೇಳುವರಲ್ಲವೆ ? ತುಂಗಭದ್ರೆಯು ಈ ಮಹಿಮೆ ದಕ್ಷಿಣಗಂಗೆ ಎಂಬ ಅನ್ವರ್ಥಕ ಬಿರುದಿನಿಂದ ಇನ್ನಷ್ಟು

ಮನೋಹರವಾಗಿದೆ. ಇಂಥ ಈ ತುಂಗಭದ್ರೆಯ ನೆರೆಯ ಪ್ರದೇಶದಲ್ಲಿ ಕುಂತಳ ದೇಶದ ಅಧಿಪತಿಯೆನಿಸಿದ ಕಂಪಿಲರಾಯ ಎಂಬ ನರೇಂದ್ರನು ಗಿರಿ ದುರ್ಗ, ವನದುರ್ಗ, ಸ್ಥಲದುರ್ಗಗಳಿಂದ ದುರ್ಭೇದ್ಯವಾದ ಹೊಸಮಲೆ ಎಂಬ ರಾಜ್ಯವನ್ನು ಸುಖಸಂಕಥಾವಿನೋದದಿಂದ ಪರಿಪಾಲನ ಮಾಡುತ್ತಿದ್ದನು. ಆತನ ಪತ್ನಿಯರಲ್ಲಿ ಹಿರಿಯಳಾದ ಹರಿಹರದೇವಿ ಎಂಬವಳು ಪಟ್ಟದ ರಾಣಿ ಯಾಗಿದ್ದಳು. ಬೇರೆ ಮಕ್ಕಳಿದ್ದರೂ ತಮ್ಮ ಉದರದಲ್ಲಿ ಅತ್ಯಂತ ಪ್ರತಾಪಿ ಯಾದ ಪುತ್ರನ ಜನನವಾಗಬೇಕೆಂದು ಕಂಪಿಲರಾಯ ಮತ್ತು ಹರಿಹರ ದೇವಿ—ಇವರು ಸ್ವಾಮಿ ಶ್ರೀ ಜಟಿಂಗ ರಾಮೇಶ್ವರನಲ್ಲಿ ಹರಕೆಯನ್ನು ಹೊತ್ತರು. ಅವರ ಪ್ರಾರ್ಥನೆಯನ್ನು ಮನ್ನಿಸಿ ಅವರ ಸೇವೆಯಿಂದ ಸಂತುಷ್ಟ ನಾದ ರಾಮೇಶ್ವರನು ವರವನ್ನು ನೀಡಿದನು.

ಪರಮಸಾಧ್ವಿ ಹರಿಹರದೇವಿ ಗರ್ಭವತಿಯಾದಳು. ಶುಕ್ಲಪಕ್ಷದ ಶಶಿಯಂತೆ ಗರ್ಭವು ಕಲಾಪೂರ್ಣವಾಗುತ್ತಿರಲು, ಆ ಮಹಾನುಭಾವೆಗೆ ಕೈಯಲ್ಲಿ ಕತ್ತಿ ಬಿಲ್ಲು ಬಾಣಗಳನ್ನು ಸದಾ ಹಿಡಿಯಬೇಕು, ಯುದ್ಧಕ್ಕೆ ಹೋಗಬೇಕು, ದುಷ್ಟ ಶತ್ರುಗಳನ್ನು ಸೋಲಿಸಬೇಕು, ಎಂಬೀ ಪರಿಯ ಬಯಕೆಗಳು ತೋರಿದುವು. ಒಂಬತ್ತು ತಿಂಗಳುಗಳು ತುಂಬಿ ಸುಕುಮಾರನಾದ ಕುಮಾರನ ಉದಯವಾಯಿತು. ತಂದೆತಾಯಿಗಳು ತಮ್ಮ ಕುಲಸ್ವಾಮಿಗೆ ಕೃತಜ್ಞರಾಗಿ ಆತನ ಹೆಸರಿನಿಂದ ಆ ಶಿಶುವಿಗೆ ಕುಮಾರ ರಾಮನಾಥ ಎಂದು ನಾಮಕರಣ ಮಾಡಿದರು.

ಕುಮಾರ ರಾಮನಾಥನ ಬಾಲಕ್ರೀಡೆಗಳನ್ನು ಏನೆಂದು ಬಣ್ಣಿಸುವುದು? ಚಿಕ್ಕ ವಯಸ್ಸಿನಲ್ಲಿಯೆ ಆತನು ಆಡುತ್ತ ಆಡುತ್ತ ಶಸ್ತ್ರವಿದ್ಯೆಯಲ್ಲಿ ಪಾರಂಗತ ನಾದನು. ಗಜಾರೋಹಣ, ಅಶ್ವಾರೋಹಣ, ರಾಜನೀತಿ, ದಂಡನೀತಿ, ಮೊದಲಾದ ಶಾಸ್ತ್ರಗಳನ್ನು ಅರಿತನು. ತನ್ನಂತೆ ಕೆಚ್ಚೆದೆಯ ಕಡುಗಲಿಗಳಾದ ಸಂಗಡಿಗರ ಗುಂಪೊಂದನ್ನು ಕಟ್ಟಿಕೊಂಡನು. ಹೊಸಮಲೆ ರಾಜ್ಯದ ಸುತ್ತಲು ಅರಿರಾಜರು ಹುಯ್‌ಗುಡುತ್ತಿದ್ದರು. ಅವರ ಸದ್ದನ್ನು ಅಡಗಿಸಲು ಕಂಪಿಲ ರಾಯನು ಮೇಲಿಂದಮೇಲೆ ಯುದ್ಧದಲ್ಲಿ ತೊಡಗಬೇಕಾಗುತ್ತಿತ್ತು. ತಂದೆಯ ಈ ಸಂಗ್ರಾಮಗಳಲ್ಲಿ ಕುಮಾರ ರಾಮನಾಥನು ಉತ್ಸಾಹದಿಂದ ಭಾಗವಹಿಸಿ

ಜಯಶೀಲನಾಗುತ್ತಿದ್ದನು. ಹೀಗೆ ಅಲ್ಪಾವಕಾಶದಲ್ಲಿ ಕುಮಾರ ರಾಮನಾಥನ ಕೀರ್ತಿ ದಿಗ್‍ದೇಶಗಳಲ್ಲಿ ಹಬ್ಬಿತು. ಆತನ ಶೌರ್ಯಸಾಹಸದ ವೃತ್ತಾಂತಗಳನ್ನು ಕೇಳಿ ದಿಲ್ಲಿಯ ಸುಲ್ತಾನನು ಬೆರಗಾದನು.

ಕುಮಾರ ರಾಮನಾಥನ ಸಾಹಸಕೃತಿಗಳು ಒಂದೇ ಎರಡೇ ? ಆತನು ತನ್ನ ಅದ್ಭುತ ಶಕ್ತಿಯಿಂದ ಅನ್ಯರಿಗೆ ಅಸಾಧ್ಯವಾಗಿದ್ದ ಬೊಲ್ಲ ಎಂಬ ಮದೋನ್ಮತ್ತ ಕುದುರೆಯನ್ನು ಅಂಕೆಗೆ ತಂದನು. ಅದು ಮುಂದೆ ಆತನ ಜೀವನದ ಸಹಚರವಾಯಿತು. ಕುಮಾರ ರಾಮನಾಥನು ದಿಲ್ಲಿಯ ಸುಲ್ತಾನನ ಪಕ್ಷಪಾತಿಯಾಗಿದ್ದ ಗುತ್ತಿಯ ಜಗದಪ್ಪರಾಯನನ್ನು ಗುದ್ದಿ ಕೆಡಹಿದನು. ಓರಗಲ್ಲಿನ ಕಾಕತಿ ಅರಸನನ್ನು ಒದರುವಂತೆ ಮಾಡಿದನು. ಕಲಿಂಗ ದೇಶದ ಗಜಪತಿಯನ್ನು ಕಂಗೆಡಿಸಿದನು. ಹೊಯ್ಸಳ ಬಲ್ಲಾಳನ ಹುಯ್ಲನ್ನು ಹತ್ತಿಕ್ಕಿದನು. ದಿಲ್ಲಿ ಸುಲ್ತಾನನ ಸೇನಾಪತಿಗಳನ್ನು ದಿಗಿಲುಗೊಳಿಸಿದನು.

ಕುಮಾರ ರಾಮನಾಥನ ಪರದಾರ ಸೋದರತ್ವವೇನು ಸಾಮಾನ್ಯವೆ ? ಸಾಕ್ಷಾತ್ ದಿಲ್ಲಿಯ ಸುಲ್ತಾನನ ಮಗಳು ಕುಮಾರ ರಾಮನಾಥನಿಗೆ ಮನ ಸೋತಳು. ಆದರೆ ಆತನು ಮಾತ್ರ ಪ್ರಣಯಿನಿಯನ್ನು ಮೋಹಿಸಲಿಲ್ಲವಾದುದರಿಂದ ಆಕೆಯ ಮನೋರಥವು ಮುಂದುವರಿಯಲಿಲ್ಲ. ರಾಮನಾಥನ ಸ್ವಂತ ಚಿಕ್ಕತಾಯಿಯೂ ಕಂಪಿಲರಾಯನ ಮುದ್ದಿನ ರಾಣಿಯೂ ಆದ ರತ್ನಾಜಿ ಆತನನ್ನು ಕೆಟ್ಟಕಣ್ಣಿನಿಂದ ನೋಡಿದಳು. ಆದರೆ ಆತನು ಆಕೆಯ ಬಲೆಗೆ ಸಿಲುಕಲಿಲ್ಲ. ಇದರಿಂದ ರತ್ನಾಜಿಗೆ ರಾಮನಾಥನ ಮೇಲೆ ದ್ವೇಷವು ಹುಟ್ಟಿತು. ಆಕೆ ಕಂಪಿಲರಾಯನ ಮುಂದೆ ರಾಮನಾಥನ ಮೇಲೆ ದೂರನ್ನು ಹೇಳಿ ಇಲ್ಲದ ಸಲ್ಲದ ಆರೋಪಗಳನ್ನು ಹೊರಿಸಿದಳು. ಆಕೆಯ ಮಾತುಗಳನ್ನು ನಂಬಿ ಕಂಪಿಲರಾಯನು ಕುಮಾರ ರಾಮನಾಥನನ್ನು ಕೊಲ್ಲಿಸಲು ಬಗೆದನು. ಆಗ ಕಂಪಿಲರಾಯನ ಚಾಣಾಕ್ಷ ಮಂತ್ರಿಯಾದ ಬೈಚವೆಗ್ಗಡೆ, ರಾಮನಾಥನು ಹತನಾದನೆಂದು ಕೃತಕ ಸುದ್ದಿಯನ್ನು ಹುಟ್ಟಿಸಿದನು. ರಾಮನಾಥನನ್ನು ಒಂದು ಗವಿಯಲ್ಲಿ ಅಡಗಿಸಿಟ್ಟು ಆತನ ಪ್ರಾಣವನ್ನು ಕಾಪಾಡಿದನು.

ಕುಮಾರ ರಾಮನಾಥನ ಮರಣವಾರ್ತೆಯನ್ನು ಕೇಳಿ ಆನಂದಿತರಾದ ದಿಲ್ಲಿಯ ಸೈನ್ಯದವರು ಬಂದು ಕುಮ್ಮಟ ದುರ್ಗವನ್ನು ಮುತ್ತಿದರು. ಈ ಸಂಕಟದಲ್ಲಿ ರಾಮನಾಥನು ಇರಬೇಕಾಗಿತ್ತೆಂದು ಕಂಪಿಲರಾಯನು ಪಶ್ಚಾತ್ತಾಪ ಪಟ್ಟನು. ಬೈಚವೆಗ್ಗಡೆ ಯುಕ್ತಿಯಿಂದ ಅಜ್ಞಾತವೀರನ ವೇಷದಲ್ಲಿ ರಾಮನಾಥನನ್ನು ಯುದ್ಧಕ್ಕೆ ಕರೆತಂದನು. ರಾಮನಾಥನು ಅತುಲ ಪ್ರತಾಪದಿಂದ ಕಾದಿ ತಂದೆಯ ಮಾನವನ್ನೂ ರಾಜ್ಯವನ್ನೂ ಉಳುಹಿದನು. ಬಳಿಕ ಕಂಪಿಲರಾಯನಿಗೆ ನಿಜ ಸಂಗತಿ ತಿಳಿದು ಆತನು ಹೆಚ್ಚಿನ ಪ್ರೀತಿ ವಿಶ್ವಾಸಗಳಿಂದ ರಾಮನಾಥನನ್ನು ಆದರಿಸಿದನು. ಕುಮಾರ ರಾಮನಾಥನ ಹೆಚ್ಚಳವನ್ನು ಕಂಡು ಆತನ ಬಲತಾಯಿ ರತ್ನಾಜಿ ಆತ್ಮಹತ್ಯ ಮಾಡಿಕೊಂಡಳು.

ಕುಮಾರ ರಾಮನಾಥನ ಕೈಯಿಂದ ಹಲವುಬಾರಿ ಬಡಿದಟ್ಟಿಸಿಕೊಂಡು ಓಡಿಹೋದ ದಿಲ್ಲಿಯ ಸೇನಾಪತಿಗಳು ಸುಲ್ತಾನನ ಮುಂದೆ ಗೋಳಿಟ್ಟರು. ದಿಲ್ಲಿಯ ಸುಲ್ತಾನನ ಬಾಗಿಲವನ್ನು ಕಾಯುವ ಒಬ್ಬ ಧೃಷ್ಟ ಹೆಂಗಸು ಇದ್ದಳು. ಈಕೆ ಮಾತಂಗಿ. ಮಾತಂಗಿಯ ಧೈರ್ಯದ ಮತ್ತು ಉತ್ತೇಜನದ ಮಾತುಗಳಿಂದ ಹುರಿದುಂಬಿದವರಾದ ದಿಲ್ಲಿಯ ಸೇನಾಪತಿಗಳು ಕುಮ್ಮಟದುರ್ಗದ ಮೇಲೆ ಪುನಃ ಏರಾಟಮಾಡಿದರು. ಕುಮಾರ ರಾಮನಾಥನು ಅಚಲನಿರ್ಧಾರದಿಂದ ಹೋರಾಡಿದನು. ಅನುಪಮ ಸಂಗ್ರಾಮ ಕೌಶಲವನ್ನು ಪ್ರಕಟಿಸಿದನು. ತನ್ನ ಕೈಗೆ ಸಿಕ್ಕ ಮಾತಂಗಿಗೆ ಅಬಲೆಯೆಂದು ಜೀವದಾನ ಮಾಡಿದನು. ಆದರೆ ಮಾತಂಗಿಯ ದ್ವೇಷಾಗ್ನಿ ಶಾಂತವಾಗಲಿಲ್ಲ. ಆಕೆ ಸೇನಾನಾಯಕನನ್ನು ಪ್ರೋತ್ಸಾಹಿಸಿ ನಾಲ್ಕು ದಿಕ್ಕಿನಿಂದ ಕುಮಾರ ರಾಮನಾಥನ ಮೇಲೆ ಮುಗಿಬೀಳುವಂತೆ ಮಾಡಿದಳು. ಅತಿ ಘೋರವಾದ ಕದನ ನಡೆಯಿತು. ಈ ನಡುವೆ ಕುಮಾರ ರಾಮನಾಥನ ಪಕ್ಷದ ಕೆಲ ಸೈನಿಕರು ವಿಶ್ವಾಸಘಾತ ಮಾಡಿದರು. ಕುಮಾರ ರಾಮನಾಥನು ಪ್ರಚಂಡ ಶೌರ್ಯದಿಂದ ಕೊನೆಯವರೆಗೆ ಕಾದುತ್ತ ಧಾರಾತೀರ್ಥದಲ್ಲಿ ಪತನ ಹೊಂದಿದನು.

ಈ ಪರಿಯಲ್ಲಿ ಕುಮಾರ ರಾಮನಾಥನ ಇಹಲೋಕದ ಜೀವನ ಕಾರ್ಯವು ಸಮಾಪ್ತವಾಯಿತು. ಆತನ ಅವತಾರಲೀಲೆ ಮುಗಿಯಿತು.

ಶ್ರೀಶಂಕರರು ಕೈಲಾಸದಲ್ಲಿ ಅತ್ಯಂತ ವಾತ್ಸಲ್ಯದಿಂದ ಆತನನ್ನು ಬರಮಾಡಿ ಕೊಂಡರು. ಆತನ ಬರವನ್ನು ಕಂಡು ಶಿವಗಣದವರು ಸಂತೋಷಭರಿತ ರಾದರು.

[ ೪ ]

ಶಿವದಾಸ ಜಕ್ಕಿನಾಯಕನ ಈ ಕಥಾನಿರೂಪಣೆ ಬಹಳ ಆಕರ್ಷಕ ವಾಯಿತು. ಆತನ ವಾಣಿಯು ಮಾಧುರ್ಯವೇ ಮಾಧುರ್ಯ. ಆತನ ಶೈಲಿ ತಾನೇತಾನಾದುದು. ಮೇಲಾಗಿ ಇಂದಿನ ಕಥಾವಿಷಯುವೋ ಎಂತಹರ ಅಂತಃಕರಣವನ್ನೂ ಸ್ಫುರಣಗೊಳಿಸುವಂತಹದು. ಜಕ್ಕಿನಾಯಕನು, ಮೇಲೆ ಸಂಕ್ಷೇಪವಾಗಿ ರೂಪಿಸಿದ ಕುಮಾರ ರಾಮನಾಥನ ಚರಿತ್ರೆಯ ಅನೇಕ ಸಂನಿ ವೇಶಗಳನ್ನು ಎತ್ತಿಕೊಂಡು ಅವುಗಳನ್ನು ವಿವರವಾಗಿ ರಸಪೂರ್ಣವಾಗಿ ಹೃದಯಸ್ಪರ್ಶಿಯಾಗಿ ಪ್ರತಿಪಾದಿಸಿದನು. ಕುಮಾರ ರಾಮನಾಥನ ದುರಂತ ಜೀವನದ ಅಂತಿಮ ವೃತ್ತಾಂತವನ್ನು ಕೇಳುವಾಗ ಶ್ರೋತೃಹೃದಯ ಗಳು ಶೋಕ ಸಂತಾಪಗಳಿಂದ ವಿಹ್ವಲವಾದುವು. ಈ ಅಳಿಲನ್ನು ತಡೆಯಾರದೆ ಅನೇಕರು ಕಂಬನಿಯನ್ನು ಸುರಿಸುತ್ತ ಬಿಕ್ಕಿ ಬಿಕ್ಕಿ ಅಳತೊಡಗಿದರು.

ಎಲ್ಲರಿಗಿಂತ ಹೆಚ್ಚಿನ ಪರಿಣಾಮವು ತಳವಾರ ಬೀರನಾಯಕನಲ್ಲಿ ಕಂಡುಬಂದಿತು. “ ಶ್ರೀ ರಾಮನಾಥ ದೇವಾ ! ಶ್ರೀ ರಾಮನಾಥ ದೇವಾ !” ಎಂದು ಆತನು ಗಟ್ಟಿಯಾಗಿ ಕೂಗಿದನು. ಹುಚ್ಚು ಹಿಡಿದಂತೆ ದಿಗ್ಗನೆ ಎದ್ದು ಜಕ್ಕಿನಾಯಕನ ಬಳಿಗೆ ಓಡಿ ಹೋದನು. ಆತನ ಪಾದಗಳಿಗೆ ಪ್ರಣಾಮ ಮಾಡಿ “ ರಾಮನಾಥಾ, ರಾಮನಾಥಾ ” ಎಂದು ಚಪ್ಪಾಳೆ ತಟ್ಟುತ್ತ ಆತನ ಸುತ್ತಲು ಪ್ರದಕ್ಷಿಣೆ ತಿರುಗಿದನು.

ಈ ವಿಧದಲ್ಲಿ ಕೆರಳಿದ ಭಾವನೆಗಳು ಶಾಂತವಾಗಲೆಂದು ಜಕ್ಕಿನಾಯ ಕನು ಕೆಲ ನಿಮಿಷ ಕೈ ಜೋಡಿಸಿ ತಟಸ್ಥನಾಗಿ ಸುಮ್ಮನೆ ನಿಂತುಕೊಂಡನು. ಸಭಿಕರಲ್ಲಿ ಶಾಂತತೆ ಉಂಟಾಯಿತು.

ಜಕ್ಕಿನಾಯಕನು ಅಂದಿನ ಕಥಾಲಾಪದ ಉಪಸಂಹಾರವನ್ನು ಪ್ರಾರಂಭಿ ಸಿದನು. ಇದು ಮುಖ್ಯವಾಗಿ ಭಜನ ಮತ್ತು ಸಂಕೀರ್ತನ ಸ್ವರೂಪ

ದ್ದಾಗಿತ್ತು. ಇದರಲ್ಲಿ ಆತನ ಮೇಳದವರೆಲ್ಲರೂ ಭಾಗವಹಿಸಿದರು. ಆತನು ಮೆದುವಾಗಿ ಒಂದೊಂದು ನುಡಿಯನ್ನು ಹೇಳುವನು. ಮೇಳದವರು ಅದನ್ನೇ ತಾಳ ವಾದ್ಯಗಳ ಸಾಮರಸ್ಯದೊಂದಿಗೆ ಉಚ್ಚಾರಮಾಡುವರು. ಆ ಕ್ರಮವು ಹೀಗೆ ಮುಂದುವರಿಯಿತು:

ರಾಮನಾಥ ರಾಮನಾಥ ।
ಕಂಪಿಲಪುತ್ರ ರಾಮನಾಥ ॥

ಶಿವಕುಮಾರ ರಾಮನಾಥ ।
ಅವತಾರಪುರುಷ ರಾಮನಾಥ ॥

ಸ್ನೇಹದಲ್ಲಿ ರಾಮನಾಥ ।
ಸರಸದಲ್ಲಿ ರಾಮನಾಥ ॥

ಶೌರ್ಯದಲ್ಲಿ ರಾಮನಾಥ ।
ಧೈರ್ಯದಲ್ಲಿ ರಾಮನಾಥ ॥

ವೀರಾಧಿವೀರ ರಾಮನಾಥ ।
ಏಕಾಂಗವೀರ ರಾಮನಾಥ ॥

ಭಕ್ತಿಯಲ್ಲಿ ರಾಮನಾಥ ।
ಯುಕ್ತಿಯಲ್ಲಿ ರಾಮನಾಥ ॥

ಸತ್ಯದಲ್ಲಿ ರಾಮನಾಥ ।
ಶೀಲದಲ್ಲಿ ರಾಮನಾಥ ॥

ಧರ್ಮದಲ್ಲಿ ರಾಮನಾಥ ।
ಪುಣ್ಯದಲ್ಲಿ ರಾಮನಾಥ ॥

ತ್ಯಾಗದಲ್ಲಿ ರಾಮನಾಥ ।
ಯೋಗದಲ್ಲಿ ರಾಮನಾಥ ॥

ಪಾವನಕೀರ್ತಿ ರಾಮನಾಥ ।
ಅಮರಜ್ಯೋತಿ ರಾಮನಾಥ ॥

ಕನ್ನಡನಾಡಿನ ರಾಮನಾಥ |
ಸನ್ನುತಚರಿತ ರಾಮನಾಥ ||

ಮಹಾನುಭಾವ ರಾಮನಾಥ |
ಚಿರಂಜೀವಿ ರಾಮನಾಥ ||

ಜಯ್ ಜಯ್ ರಾಮನಾಥ |
ಜಯತು ಜಯತು ಶ್ರೀ ರಾಮನಾಥ ||

ಸಂಕೀರ್ತನವು ಸಮಾಪ್ತವಾಯಿತು. ಆ ಮೇಲೆ ಶಿವಯೋಗಿಗಳು ಕುಮಾರ ರಾಮನಾಥನ ವಿಗ್ರಹಕ್ಕೆ ಮಂಗಲಾರತಿಯನ್ನು ಮಾಡಿದರು. ಸಕಲ ರಾಜೋಪಚಾರಗಳನ್ನು ಸಲ್ಲಿಸಿದರು. ಈ ಸಂದರ್ಭದಲ್ಲಿ ಜಕ್ಕಿ ನಾಯಕನು ಘನಗಂಭೀರ ಧ್ವನಿಯಲ್ಲಿ ಕುಮಾರ ರಾಮನಾಥನ ಬಿರುದುಗಳನ್ನು ಉಗ್ಗಡಿಸಿದನು. ಅದು ಹೀಗೆ:

"ಓಂ | ಶ್ರೀ ಗಂಡರ ಗಂಡ, ಗರ್ವಿತರಾಯ ಶರಭಭೇರುಂಡ, ಚಲದಂಕಮಲ್ಲ, ಕಲಿರಿಪು ಕುವಲಯ ಮಾರ್ತಂಡ, ಅಹಿತಗಿರಿ ವಜ್ರದಂಡ, ಉದ್ದಂಡ ವಿಕ್ರಮ, ಜಂಗುಳಿ ಕುವರರ ಗಂಡ, ನವಲಕ್ಷ ತೆಲುಗರ ಗಂಡ, ಭೂಮಿಯ ಚೆಲ್ವ ಕುವರರ ಗಂಡ, ನರಪತಿ ಗಜಪತಿ ಅಶ್ವಪತಿಗಳೆಂಬರಸುಗಳಿಗೆ ಗಂಡ, ಮೂವರು ರಾಯರ ಗಂಡ, ನರಪತಿ ನರರಾಕ್ಷಸಪ್ರಾಯ, ಗಜಪತಿ ಗಜಕಂಠೀರವ, ಸಹ್ಯಾದ್ರಿ ಜಯಸ್ತಂಭ ಪ್ರತಿಷ್ಠಾಪನಾಚಾರ್ಯ, ತುರುಷ್ಕಕುಲ ಝುಂಝಾಸಮೀರಣ, ಕೊಂಕಣಕೋಲಾಹಳ, ತುಳುವದಳ ದಾವಾನಳ, ಸುರಿತಾಳಬಳ ಸೂರೆಕಾರ, ಬಲ್ಲಾಳಬಲ ಬಲು ಬಂದಿಕಾರ, ಮೀಸರಗಂಡ, ಆಸೆಗೆಯ್ವರ ಗಂಡ, ಮಚ್ಚರಿಪ ಮನ್ನೆಯರ ಗಂಡ, ಮೂಡ-ತೆಂಕಣ-ಬಡಗ-ಪಡುವ ರಾಯರ ಗಂಡ, ಛಪ್ಪನ್ನ ದೇಶದ ಮನ್ನೆಯರ ಗಂಡ, ಅರಿರಾಯ ಮಾರ್ತಂಡ, ಪರಬಲ ಮಸ್ತಕಶೂಲ, ಧುರಧೀರ ಶರಭಭೇರುಂಡ, ಕೊಟ್ಟ ಭಾಷೆಗೆ ತಪ್ಪುವ ರಾಯರ ಗಂಡ, ನವಲಕ್ಷ

ತುರುಷ್ಕರ ಗಂಡ, ಪರವನಿತಾಸಹೋದರ, ರಾಜಾಧಿರಾಜ, ರಾಜ ಪರಮೇಶ್ವರ, ಕುಮಾರ ರಾಮನಾಥದೇವ ! ಭೋ ಪರಾಕ್ !! ”

ಇದಾದ ಬಳಿಕ ಮೃತ್ಯುಂಜಯ ಶಿವಯೋಗಿಗಳ ಮುಖದಿಂದ ಈ ಮಾತುಗಳು ಪ್ರಕಟವಾದುವು:

“ ಉತ್ತಮೋತ್ತಮ ಗುಣಗಳು ಉತ್ಕಟವಾಗಿ ವಾಸಮಾಡುವ ಸ್ಥಾನಗಳಲ್ಲೆಲ್ಲ ತನ್ನ ಅಧಿಷ್ಠಾನವಿರುವುದೆಂದು ಶ್ರೀ ಕೃಷ್ಣನು ಭಗವದ್ಗೀತೆಯಲ್ಲಿ ಹೇಳಿರುವನು. ಈ ವಿಚಾರದಿಂದ ಕುಮಾರ ರಾಮನಾಥರು ದೇವಾಂಶರೂ ವಿಭೂತಿಪುರುಷರೂ ಅಹುದು ಎಂಬಲ್ಲಿ ಸಂದೇಹವಿಲ್ಲ. ಕುಮಾರ ರಾಮನಾಥರು ದೇಶಕ್ಕಾಗಿ ಧರ್ಮಕ್ಕಾಗಿ ಹೋರಾಡುತ್ತ ರಣಾಂಗಣದಲ್ಲಿ ದೇಹತ್ಯಾಗ ಮಾಡಿದರು. ಇಂತಹರು ತತ್ಕಾಲದಲ್ಲಿ ಸೂರ್ಯಮಂಡಲವನ್ನು ಭೇದಿಸಿ, ತಪೋನಿಷ್ಠಯೋಗಿಗಳಿಗೆ ಮಾತ್ರ ಲಭ್ಯವಾದ, ಉತ್ತಮಗತಿಯನ್ನು ಪಡೆಯುವರೆಂದು ಜ್ಞಾನಿಗಳು ಹೇಳುವರು. ಕುಮಾರ ರಾಮನಾಥರು ಕರ್ನಾಟಕದ ಮಹಾ ವಿಭೂತಿಗಳಲ್ಲಿ ಒಬ್ಬರು. ಅವರ ಪುಣ್ಯಜೀವನವೊಂದು ಕನ್ನಡ ನಾಡಿನ ಹಿರಿಮೆ. ಇಂತಹ ಮಹಾಮಹಿಮರ ಸ್ಮಾರಕಗಳು ನಮ್ಮ ಜನಾಂಗದ ಅಭ್ಯುದಯಕ್ಕೆ ಸಹಾಯಕವಾಗುವುವು. ಅಮರಜ್ಯೋತಿ ಶ್ರೀರಾಮನಾಥರು ಧ್ರುವತಾರೆಯಂತೆ ತೇಜಃಪುಂಜ ಯಶಃಕಾಯದಿಂದ ಪ್ರಕಾಶಮಾನರಾಗಿರುವರು. ಅವರ ಪುಣ್ಯಕಾಂತಿ ನಮ್ಮೆಲ್ಲರನ್ನು ಸದಾ ಸನ್ಮಾರ್ಗದಲ್ಲಿ ಇರಿಸಲಿ, ಜಯ ಭುವನೇಶ್ವರಿ ! ”

ಪ್ರಸಾದ ಹಂಚುವುದು ಸಮಾರಂಭದ ಕೊನೆಯ ಭಾಗ. ಈ ಹೊತ್ತಿಗೆ ಇರುಳು ಸರಿದು ಬೆಳಕು ಹರಿಯುತಲಿತ್ತು. ಮೃತ್ಯುಂಜಯ ಶಿವಯೋಗಿಗಳು ಬೇಸರಿಯದೆ ಬಂದವರಿಗೆಲ್ಲ ಪ್ರಸಾದವನ್ನು ಹಂಚಿದರು. ಅದನ್ನು ಪಡೆದುಕೊಂಡು, ಅವರಿಗೆ ವಂದನೆಗಳನ್ನು ಅರ್ಪಿಸಿ, ಧನ್ಯಭಾವನೆಯಿಂದ ಸರ್ವರು ಸ್ವಸ್ಥಳಗಳಿಗೆ ಪ್ರಯಾಣಮಾಡಿದರು.

---

ಕತೆ ಎರಡು

# ಅಹುದೋ ಎದೆಗಾರ !



ಮಾನೋಮಿ ಉತ್ಸವವು ವಿಜಯ ನಗರದಲ್ಲಿ ವಿಜೃಂಭಣೆಯಿಂದ ನಡೆಯುತ್ತಿದ್ದಿತು. ಈ ನಿಮಿತ್ತ ಅನೇಕ ಕಾರ್ಯಕ್ರಮಗಳು ಏರ್ಪಡುತ್ತಿದ್ದವು. ಇಂತಹ ಒಂದು ಸಂದರ್ಭದಲ್ಲಿ ಒಬ್ಬ ಆಗಂತುಕನು ವೀರಪರೀಕ್ಷೆಯ ಹೊಂಚನ್ನು ಹೂಡಿದನು. ಈ ರಹಸ್ಯಮಯ ಸಂನಿವೇಶದ ವಿವರಗಳನ್ನು ಇಲ್ಲಿ ನಿರೂಪಿಸಿದೆ. ಈ ಕಥೆಯ ಕಾಲ ಹದಿನೈದನೆಯ ಶತಮಾನದ ಉತ್ತರ ಭಾಗ.

[ ೧ ]

ಇದ್ದಕ್ಕಿದ್ದ ಹಾಗೆ ಭಟಪುರುಷನೊಬ್ಬನು ಎದ್ದು ನಿಂತನು. ಸಭಿಕರನ್ನು ಉದ್ದೇಶಿಸಿ ಉಚ್ಚಸ್ವರದಿಂದ ಈ ಮುಂದಿನ ಮಾತುಗಳನ್ನು ಉಚ್ಚರಿಸಿದನು !

ಕೇಳಿ ಧೀರರೆ ಕೇಳಿ ।
ಏಳಿ ಶೂರರೆ ಏಳಿ ॥

ಇದೊ ನೋಡಿ ಈ ಅಲಗು ।
ಇದರ ಅಂದದ ಸೊಬಗು ॥

ಇರಿವೆ ನಾನಿದರಿಂದೆ ।
ಬರಲಿ ನಿಮ್ಮೆದೆ ಮುಂದೆ ॥

ಉಂಟೆ ವೀರರು ಇಲ್ಲಿ ಯಾರಾದರುಂಟೆ ।
ಬಂಟರುಂಟೇ ಬನ್ನಿ ಎದೆಗಾರರುಂಟೆ ॥

ಆ ವೀರನ ಕೈಯಲ್ಲಿ ಪಳಪಳನೆ ಹೊಳೆಯುವ ಒಂದು ಕಿರುಗತ್ತಿ ಇದ್ದಿತು. ಅದನ್ನು ತೋರಿಸುತ್ತ ಗಂಭೀರವಾಣಿಯಿಂದ ಆತನು ಈ ನುಡಿಗಳನ್ನು ಆಡಿದನು. ಮಾತು ಮುಗಿದ ಕೂಡಲೆ ತನ್ನ ಸ್ಥಳದಲ್ಲಿ ಕುಳಿತುಬಿಟ್ಟನು. ಆತನ ಮಾತುಗಳು ಒಗಟದಂತೆ ತೋರಿದವು.

ಭಟಪುರುಷನ ಈ ಆವಿರ್ಭಾವದಿಂದ ಸಭೆಯಲ್ಲಿ ಗೊಂದಲ ಎದ್ದಿತು. ಹಲವರಿಗೆ ಆತನ ಮಾತಿನ ಸರಿಯಾದ ಅಭಿಪ್ರಾಯವೇ ಆಗಲಿಲ್ಲ. ಅನೇಕರಿಗೆ ಇದೇನು ಸಮಾಚಾರ ಎಂಬುದು ಸ್ಪಷ್ಟವಾಗಿ ತಿಳಿಯಲಿಲ್ಲ.

ಅದು ಒಂದು ಮಹಾಸಭೆ. ವಿಜಯನಗರ ರಾಜಧಾನಿಯಲ್ಲಿ ಕೂಡಿದ ಬೃಹತ್ ಸಂಮೇಲನ. ಮಹಾನವಮಿಯ ಉತ್ಸವದ ನಿಮಿತ್ತದಿಂದ ಏರ್ಪಡಿಸಿದ ರಾಜ-ಪ್ರಜಾಸ್ಥಾನದ ಒಡ್ಡೋಲಗ. ವಿಸ್ತಾರವಾದ ವಿಜಯನಗರ ಸಾಮ್ರಾಜ್ಯದ ಮೂರ್ಧಾಭಿಷಿಕ್ತ ಮಹಾರಾಜನನ್ನು ಮೊದಲುಗೊಂಡು ಆ

ರಾಷ್ಟ್ರದಲ್ಲಿಯ ಕೊನೆಯ ನಾಗರಿಕನ ವರೆಗೆ ವಿವಿಧ ಅಂತಸ್ತಿನ ಜನಸ್ತೋಮವು ಆತ್ಮೀಯತೆಯ ಅಭಿಮಾನದಿಂದ ಅಲ್ಲಿ ಉಪಸ್ಥಿತ ವಾಗಿದ್ದಿತು.

ಮಹಾನವಮಿಯ ಉತ್ಸವವೆಂದರೆ ವಿಜಯನಗರದ ಜನಗಳಿಗೆ ಹಿರಿಯ ಹುಮ್ಮಸಿನ ಹಬ್ಬ. ಹತ್ತುದಿನಗಳ ವರೆಗೆ ಬಹು ವಿಜೃಂಭಣೆಯಿಂದ ನಡೆಯುವ ಈ ಸಂತೋಷ ಸಮಾರಂಭದಲ್ಲಿ ಭಾಗವಹಿಸಲು ದೇಶದ ನಾನಾ ಪ್ರದೇಶಗಳಿಂದ ವೀರರು, ವಿದ್ವಾಂಸರು, ಕಲಾಕುಶಲರು ತಂಡ ತಂಡವಾಗಿ ಬಂದು ಸೇರುತ್ತಿದ್ದರು. ಒಳನಾಡಿನಂತೆ ಹೊರನಾಡುಗಳಿಂದಲೂ ಆಮಂತ್ರಿತ ಅರಸರು, ಅಧಿಕಾರಿಗಳು, ರಾಯಭಾರಿಗಳು, ಮೊದಲಾದವರು ಈ ಪರಿಷತ್ತಿನ ಅಧಿವೇಶನಗಳನ್ನು ತಮ್ಮ ಆಗಮನದಿಂದ ಅಲಂಕರಿಸುತ್ತಿದ್ದರು.

ಇಂದು ದುರ್ಗಾಷ್ಟಮಿಯ ದಿವಸ. ಈ ದಿನದ ಬೆಳಗಿನ ಜಾವದಲ್ಲಿ ಶಕ್ತಿಯ ಸ್ಪರ್ಧೆಗಳೂ, ಸಾಹಸದ ಪ್ರದರ್ಶನಗಳೂ ನಡೆದು ಹೋಗಿದ್ದವು. ಯೋಧರು ತಮ್ಮ ಆಯುಧವಿದ್ಯೆಯ ನೈಪುಣ್ಯವನ್ನು ತೋರಿಸಿದ್ದರು. ಮಲ್ಲರ ಮಲ್ಲಾಮಲ್ಲಿಯ ಮೇಲಾಟವನ್ನೂ, ಜಟ್ಟಿಗಳ ಜಗಳಾಟವನ್ನೂ ನೋಡಿ ಪ್ರೇಕ್ಷಕರು ಕುತೂಹಲಗೊಂಡಿದ್ದರು.

ಇದೀಗ ಮಧ್ಯಾಹ್ನದ ವಿವಿಧ ವಿನೋದಾವಳಿಯ ಕಾರ್ಯಕ್ರಮವು ನಡೆಯಬೇಕಾದುದು. ಕವಿಗಳ ಆಶುಕವಿತ್ವದ ಚಮತ್ಕೃತಿಯಿಂದಲೂ, ಗಮಕಿಗಳ ಕಾವ್ಯಪಠನದ ಝೇಂಕಾರದಿಂದಲೂ, ಸಂಗೀತ ಪರಿಣತರ ಗೀತವಾದ್ಯಗಳ ರಸಮಾಧುರ್ಯದಿಂದಲೂ, ನಟನರ್ತಕರ ಅಭಿನಯದ ಆವಿಷ್ಕಾರಗಳಿಂದಲೂ ತಣಿದು ತೃಪ್ತಿಗೊಳ್ಳಲು ರಸಿಕವೃಂದವು ತವಕ ಪಡುತ್ತಿದ್ದಿತು. ಅಷ್ಟರಲ್ಲಿ ಮೊದಲು ವಿವರಿಸಿದಂತೆ ಯಾವನೋ ಒಬ್ಬ ಅಜ್ಞಾತ ಭಟನು ಎದ್ದು ತನ್ನ ಆಹ್ವಾನಧ್ವನಿಯ ಅಪಸ್ವರವನ್ನು ಕೇಳಿಸಿದುದರಿಂದ ಸಭಿಕರು ದಿಗಿಲುಗೊಂಡರು.

**ಶಿವಪೂಜೆಯ ಸಂಭ್ರಮದಲ್ಲಿ ಕರಡಿಯನ್ನು ಹೊಗಿಸಿದಂತಾಯಿತು.**

[ ೨ ]

ಆ ಮಹಾಸಂಮೇಲನದ ಅಧ್ಯಕ್ಷಸ್ಥಾನವನ್ನು ವಹಿಸಿ ಉನ್ನತ ಪೀಠದಲ್ಲಿ ವಿರಾಜಮಾನವಾಗಿ ಎಲ್ಲ ಸಂನಿವೇಶಗಳನ್ನು ಸೂಕ್ಷ್ಮವಾಗಿ ಪರಾಮರ್ಶಿಸುತ್ತಿದ್ದ ಆ ಮಹಾವ್ಯಕ್ತಿಗೂ—ವಿಜಯನಗರದ ಚಕ್ರಾಧಿಪತಿಗೂ—ಆಕಸ್ಮಿಕವಾದ ಈ ಘಟನೆ ಕೆಲಮಟ್ಟಿಗೆ ಸೋಜಿಗವನ್ನು ಉಂಟುಮಾಡಿತು. ಆತನು ಮಂತ್ರಿಯನ್ನು ಕರೆಯಿಸಿಕೊಂಡು "ಇದೇನು ಸಮಾಚಾರ?" ಎಂದು ವಿಚಾರಿಸಿದನು.

ಈ ಘಟನೆಯ ಯಥಾರ್ಥ ಸ್ವರೂಪವನ್ನು ಅರಿಯದೆ ಆದರ ಅಭಿಪ್ರಾಯವನ್ನು ಅಳೆಯಲು ಅಸಮರ್ಥನಾದ ಮಂತ್ರಿನಸು ಅಸಡ್ಡೆಯಾಗಿಯೇ ಸಲಹೆಯನ್ನು ಸಲ್ಲಿಸಿದನು. ಮಂತ್ರಿ ಹೀಗೆ ಹೇಳಿದನು:

"ಮಹಾಪ್ರಭೋ! ಇದೊಂದು ಕುಚೋದ್ಯವೆಂಬಂತೆ ತೋರುತ್ತದೆ. ಈ ಕುಚೋದ್ಯಗಾರನೋ ಅನ್ಯಪ್ರಾಂತದಿಂದ ಬಂದ ಆಗಂತುಕನು. ಆತನ ಈ ವಿಕ್ಷಿಪ್ತ ವರ್ತನೆ ಆಕ್ಷೇಪಾರ್ಹವಾಗಿದೆ. ವಿವಿಧ ವಿನೋದಾವಳಿಗಳು ನಡೆಯಬೇಕಾದ ಈ ಸಂದರ್ಭದಲ್ಲಿ ಹೀಗೆ ಶೌರ್ಯಪರೀಕ್ಷೆಯ ವಿಧಾನವನ್ನು ಎಳೆದು ತರುವುದು ಈ ಸಂಮೇಲನದ ನಿಯಮಗಳಿಗೆ ವಿರುದ್ಧವಾಗಿದೆ. ಆದುದರಿಂದ ಈ ಕುಚೋದ್ಯವನ್ನು ಖಂಡಿಸಿ ನಮ್ಮ ನಿಯೋಜಿತ ಕಾರ್ಯಕ್ರಮವನ್ನು ಮುಂದುವರಿಸುವುದು ವಿಹಿತ."

ಈ ಅಭಿಪ್ರಾಯವು ಮಹಾರಾಜನಿಗೆ ಒಪ್ಪಿಗೆಯಾಗಲಿಲ್ಲ. ಆತನು ಅದಕ್ಕೆ ಪ್ರತಿಯಾಗಿ ಹೀಗೆ ಅಪ್ಪಣೆಕೊಡಿಸಿದನು:

"ಮಂತ್ರಿವರ! ನಾವು ಹೀಗೆ ಮಾಡಿದರೆ ಸರಿಯಾಗಲಿಕ್ಕಿಲ್ಲ. ಮಹಾನವಮಿ ಮಹೋತ್ಸವವು ಸಾರ್ವಜನಿಕವಾದ ಸಮಾರಂಭವು. ಇದರಲ್ಲಿ ಆಡಳಿತದ ಕಟ್ಟುನಿಟ್ಟಿನ ನಿರ್ಬಂಧಗಳಿಗೆ ಅವಕಾಶವಿಲ್ಲ. ಕುಚೋದ್ಯಗಾರನೆಂದು ಆ ಭಟನನ್ನು ತಳ್ಳಿಹಾಕುವುದು ಸಮಂಜಸವಾಗದು. ಮೇಲಾಗಿ ಆತನ ಪ್ರಶ್ನೆಯಲ್ಲಿ ಅಕ್ರಮವೇನೂ ಇಲ್ಲ. ಆ ಭಟನು ಇಲ್ಲಿ ನೆರೆದ ಜನಗಳಿಗೆ

ನೇರವಾಗಿ ಒಂದು ಆಹ್ವಾನವನ್ನು ಇತ್ತಿದ್ದಾನೆ. ವೀರರಾದವರಿಗೆ ಸಮಯ ನಿರ್ಬಂಧವಿರುವುದಿಲ್ಲ. ಅವರು ಯಾವಾಗಲೂ ವೀರರೇ. ವೀರಜನಾಂಗವೆಂದು ಪ್ರಸಿದ್ಧಿವೆತ್ತ ನಾವು ಈ ಆಹ್ವಾನಕ್ಕೆ ಯೋಗ್ಯ ಉತ್ತರವು ದೊರೆಯುವಂತೆ ಸಂಧಿಯನ್ನು ಕಲ್ಪಿಸಿಕೊಡತಕ್ಕದ್ದು. ಇಲ್ಲವಾದರೆ ನಮ್ಮ ದೌರ್ಬಲ್ಯವು ವ್ಯಕ್ತವಾಗಿ ನಮ್ಮ ಕೀರ್ತಿಗೆ ಕಲಂಕವು ಬರುವುದು. ಆದರೆ ಆ ವೀರನ ಅಭಿಪ್ರಾಯವು ಸಭಿಕರಿಗೆ ಸರಿಯಾಗಿ ಅರ್ಥವಾದಂತೆ ತೋರುತ್ತ ಇಲ್ಲ. ಆದುದರಿಂದ ಅದನ್ನು ವಿದಿತಪಡಿಸಿರಿ. ”

ಬೇರೆ ವಿಧಿಯಿಲ್ಲದೆ ಮಂತ್ರಿ ಹೊರಟುಹೋದನು. ಸಭಿಕರ ಮುಂದೆ ನಿಂತು ತಿಳಿಸಿ ಹೇಳಿದನು: “ ಮಹಾಜನಗಳೆ ! ಪರಪ್ರಾಂತದಿಂದ ಒಬ್ಬ ಭಟನು ಇಲ್ಲಿಗೆ ಬಂದಿರುವನು. ಆತನು ನಿಮ್ಮಗಳ ಶೌರ್ಯಪರೀಕ್ಷೆ ಮಾಡಲು ಅಪೇಕ್ಷಿಸುವನು. ನೀವುಗಳೆಲ್ಲರು ಸಾವಧಾನವಾಗಿ ಆತನ ಮಾತುಗಳನ್ನು ಆಲಿಸಬೇಕು. ಆತನು ಹಾಕುವ ಪ್ರಶ್ನೆಗೆ ಸಮರ್ಪಕವಾದ ಉತ್ತರವನ್ನು ಕೊಟ್ಟು ನಮ್ಮ ರಾಷ್ಟ್ರದ ಮಾನವನ್ನು ಕಾಪಾಡಬೇಕು.”

ಬಳಿಕ ಆ ಭವ್ಯ ಭಟನು ಮತ್ತೆ ಸಭಾಮಧ್ಯದ ಹರವಾದ ಜಗುಲಿಯ ಮೇಲೆ ಬಂದು ನಿಂತನು. ಚಂಡಿನಂತೆ ದುಂಡಾಗಿ ಸುತ್ತಿದ್ದ ದಪ್ಪನೆಯ ಮುಂಡಾಸವು ಆತನ ತಲೆಯನ್ನು ಅದುಮಿಕೊಂಡಿದ್ದಿತು. ಉದ್ದ ತೋಳಿನ ದಪ್ಪನೆಯ ನಿಲುವಂಗಿಯು ಆತನ ದೇಹದ ಬಹುಭಾಗವನ್ನು ಮುಚ್ಚಿಕೊಂಡಿದ್ದಿತು. ಆತನು ನಿರಿಗೆಯ ಉದ್ದನೆಯ ಇಜಾರನ್ನು ಉಟ್ಟಿದ್ದನು. ಆತನ ಹಣೆಯಲ್ಲಿ ಢಾಳವಾದ ಗಂಧದ ತಿರುನಾಮವೂ ಅದರ ನಡುವೆ ಚೊಕ್ಕಟವಾದ ಕುಂಕುಮ ತಿಲಕವೂ ಶೋಭಿಸುತ್ತಿದ್ದವು. ಆ ಭಟನು ಮತ್ತೆ ಮೊದಲಿನಂತೆ ಕಾವ್ಯದ ಧಾಟಿಯಲ್ಲಿ ಗಟ್ಟಿಯಾಗಿ ಮಾತನಾಡುತ್ತ ಕೊನೆಗೆ,

“ ವೀರರುಂಟೇ ಇಲ್ಲಿ, ಬಂಟರುಂಟೇ ಕೇಳಿ ।
ಯಾರಾದರೂ ಉಂಟೆ, ಏಳಿ, ಏಳಿ ॥ ”

ಎಂದು ಚುಚ್ಚುವಂತೆ ಪ್ರಶ್ನೆಮಾಡಿದನು.

ಈ ಪ್ರಶ್ನೆಯನ್ನು ಕೇಳಿ ಸಭೆಯಲ್ಲಿ ಕೆಲ ನಿಮಿಷ ನಿಶ್ಶಬ್ದತೆಯು ನೆರೆ ಹರಡಿಕೊಂಡಿತು. ಬಳಿಕ ಅಲ್ಲಲ್ಲಿ ಗುಜು ಗುಜು, ಪಿಸು ಪಿಸು, ಒಳದನಿಯ ಸಂಭಾಷಣೆಯ ಸದ್ದು ಉಂಟಾಗತೊಡಗಿತು. "ನಾ ಏಳು, ನೀ ಏಳು" ಎಂದು ಹಲವಾರು ಜನರು ಮುಂದೂ ಬರಲಾರದೆ, ಹಿಂದೂ ಉಳಿಯಲಾರದೆ ಅನುಮಾನಿಸುತ್ತಿರುವಂತೆ ತೋರಿತು. ಇದನ್ನು ನೋಡುತ್ತ ನಿಂತಿದ್ದ ಭಟನ ಮುಖದ ಮೇಲೆ ಗೆಲುವಿನ ಮುಗುಳುನಗೆ ಸುಳಿದಾಡಿದಂತೆ ಭಾಸ ವಾಯಿತು.

ಅಷ್ಟರಲ್ಲಿ ಒಬ್ಬ ಬಲ್ಲಾಳು ಸಭೆಯ ಒಂದು ಮೂಲೆಯಿಂದ ಚಂಗನೆ ಎದ್ದು ಬೇಗಬೇಗನೆ ಹೆಜ್ಜೆಯಿಕ್ಕುತ್ತ ಜಗಲಿಯತ್ತ ನಡೆದು ಬಂದನು. ಆತನು ಕುಲವಂತಿಕೆಯ ವೇಷ ಭೂಷಣಗಳಿಂದ ಶೋಭಿಸುತ್ತಿದ್ದನು. ಸೊಂಟಕ್ಕೆ ನೇತಾಡುವ ನೀಳ್ಗತ್ತಿ ಮತ್ತು ಕೈಯಲ್ಲಿ ಮಿನುಗುವ ಹರಿತವಾದ ಅರ್ಧಚಂದ್ರಾಕೃತಿ ಕೊಡಲೆ ಈ ಆಯುಧಗಳಿಂದ ಸುಸಜ್ಜಿತನಾಗಿದ್ದನು. ಅಂತಹ ಆಜಾನಬಾಹುವೂ ಅಲ್ಲದ, ಕೇವಲ ವಾಮನಮೂರ್ತಿಯೂ ಆಗದ, ಆ ವೀರನ ಶಿವಿ ಧೀರತೆಯಿಂದಲೂ ಗಂಭೀರತೆಯಿಂದಲೂ ಕೂಡಿದ್ದಿತು.

ವೀರನು ಜಗಲಿಯ ಮೇಲೆ ಭಟನ ಎದುರಿಗೆ ಬಂದು ನಿಂತನು. ಆತನ ಮುಖವನ್ನು ನಿಟ್ಟಿಸುತ್ತ ಆಢ್ಯತೆಯ ಆರ್ಭಟೆಯಿಂದ ಆತನ ಪ್ರಶ್ನೆಗೆ ಅದೇ ಧಾಟಿಯಲ್ಲಿ ಹೀಗೆ ಉತ್ತರವಿತ್ತನು:

"ಉಂಟುಂಟು ಎಲೆಭಟನೆ ! ಧೀರ ವೀರರು ಉಂಟು ।
ಉಂಟು ಕಲಿಗಳು ಇಲ್ಲಿ, ಹುಲಿಗಳೂ ಉಂಟು ॥
ಎಂಟೆದೆಯ ಯೋಧರೆಲ, ಎಣಿಕೆಯಿಲ್ಲದಲುಂಟು ।
ಬಂಟರಾ ರಾಜ್ಯವಿದು, ಕಟ್ಟು ಸೆರಗಿಗೆ ಗಂಟು ॥"

ಈ ಮಾತುಗಳನ್ನು ಕೇಳಿ ಸಭಾಸದರ ಬಗೆಯಲ್ಲಿ ಹರುಷದ ಚಿಲುಮೆ ಎದ್ದು ಚಿಮ್ಮಲಾರಂಭಿಸಿತು. "ಭಲಾ, ಭೇಷ್, ಅಹುದು, ಖಂಡಿತ" ಎಂಬ ಆನಂದೋದ್ಗಾರಗಳು ಹಲವಾರು ಮುಖಗಳಿಂದ ಹೊರಹೊಮ್ಮಿದುವು.

ಶಿವಪೂಜೆಯಲ್ಲಿ ಬಂದಿದ್ದ ಕರಡಿಗೆ ಒಬ್ಬ ಗಾರುಡಿಗ ಗಂಟುಬಿದ್ದನೆಂದು ಜನರು ತಿಳಿದರು.

[ ೩ ]

ಇದೀಗ ವಿಜಯನಗರದ ಮಹಾಜನಗಳ ಮಾನವನ್ನು ಕಾಯಲು ಜಗಲಿಯ ಮೇಲೆ ಬಂದು ನಿಂತಿದ್ದ ವೀರನು ಮೊದಲಿನ ಭಟನ ಮುಂದೆ ತನ್ನ ಮೇಲಂಗಿಯ ಕಸಿಗಳನ್ನು ಬಿಚ್ಚಿ ಎದೆಯನ್ನು ತೆರೆದು ನಿಂತಿದ್ದನು. ಆತನು ನಿಶ್ಚಲವಾದ ಧ್ವನಿಯಿಂದ ಭಟನನ್ನು ಸಂಬೋಧಿಸಿ ಹೀಗೆ ಪ್ರತಿಭಟನೆಯ ವಾಕ್ಯಗಳನ್ನು ಆಡಿದನು:

“ ತಡವೇಕೆ ಎಲವೊ ಭಟ ।
ಕೆಡಿಸುವೆನು ನಿನ್ನ ಹಟ ॥
ಇದೊ ನೋಡು ವೀರನೆದೆ ।
ಮದಿಸಿ ನುಡಿದವಗೆ ಗದೆ ॥
ತಿವಿ ನಿನ್ನ ಅಲಗನ್ನು ।
ಹವಣಿಕೆಯ ತೊಲಗಿನ್ನು ॥ ”

ಸಭಿಕರ ಆನಂದವು ಕುತೂಹಲದಲ್ಲಿ ಮಾರ್ಪಟ್ಟಿತು. ಆ ಕುತೂಹಲವೋ ಒಂದು ಬಗೆಯ ಭಯ ಮತ್ತು ಮರುಕದಿಂದ ಹೊಸೆದುಕೊಂಡಿದ್ದಿತು. ಮುಂದೇನು ? ಎಂಬ ಉತ್ಕಂಠೆಯ ಉತ್ಕಟತೆಯಿಂದ ಎಲ್ಲರ ನೋಟಗಳು ಜಗಲಿಯ ಮೇಲಿನ ನೋಟದತ್ತ ನಟ್ಟು ನಿಂತುಕೊಂಡವು.

ಭಟನು ಪ್ರಹಾರ ಮಾಡಲು ಅಣಿಯಾದನು. ಇದಿರಾಳಿಯ ನೆತ್ತರವನ್ನು ಕುಡಿಯಲು ಬಾಯಾರಿ ಮುಂದೆ ಚಾಚಿದ ನಾಗರಹಾವಿನ ನಾಲಗೆಯಂತೆ, ಕೂರಾದ ಆ ಕಿರುಗತ್ತಿ ಕರಾಲವಾಗಿ ಆತನ ಕೈಯಲ್ಲಿ ಮಿನುಗುತ್ತಿತ್ತು. ಅದನ್ನು ಅವಚಿದ ತನ್ನ ಬಲಗೈಯನ್ನು ಆತನು ಹಿಂದಕ್ಕೆ ಒಯ್ದನು. “ ಭಳಿರೆ, ಎದೆಗಾರ ! ಜಯ ಮಲ್ಲಿಕಾರ್ಜುನ !! ” ಎಂದು ಗರ್ಜನೆ ಮಾಡಿ ಭೋಂಕನೆ ಇದಿರಾಳಿಯ ಎದೆಗೆ ಇರಿದನು.

ಒಂದು ನಿಮಿಷ ಏನಾಯಿತು ಎಂಬುದು ಯಾರಿಗೂ ತಿಳಿಯಲಿಲ್ಲ. ಜಿಲ್‌ಲ್ ಎಂಬ ಕೆನ್ನೀರ ಓಕಳಿ ಪುಟನೆಗೆದು ಚಿಮ್ಮಿತು. ಕೆಂಬಣ್ಣದ ಆ ದ್ರಾವಕವು ಇದಿರಾಳಿಯ ಮೈತುಂಬ ಹರಿದು ಆತನು ರುಧಿರಸ್ನಾನ ಮಾಡಿದಂತೆ ತೋರಿತು. "ಹಾ" ಎಂದವರು ಕೆಲರು; "ಅಯ್ಯೊ" ಎಂದು ಕೂಗಿದವರು ಕೆಲರು.

ಪ್ರೇಕ್ಷಕರು ಕಣ್ಣರಳಿಸಿ ನೋಡಿದರು. ಕಣ್ಣುಗಳನ್ನು ಒರೆಸಿಕೊಂಡು ಮತ್ತೊಮ್ಮೆ ದಿಟ್ಟಿಸಿ ನೋಡಿದರು. ಅವರಿಗೆ ತಮ್ಮ ನೇತ್ರಗಳನ್ನು ನಂಬಲಿಕ್ಕೆ ಆಗಲಿಲ್ಲ. 'ಇದು ಕನಸೋ, ನನಸೋ' ಎಂಬ ದಿಗ್‌ಭ್ರಮೆ ಅವರಿಗೆ ಉಂಟಾಯಿತು. ಇದಿರಾಳಿಯು ಗರಿಯೂ ಕೊಂಕದಂತೆ ನಿರ್ಭಯವಾಗಿ, ಸುರಕ್ಷಿತವಾಗಿ ನಿಂತಲ್ಲಿಯೇ ನಿಂತಿದ್ದಾನೆ. ಆ ಕೆಂಬಣ್ಣದ ಅಭ್ಯಂಜನವನ್ನು ಬಿಟ್ಟರೆ ಆತನಿಗೆ ಯಾವ ವಿಧದ-ಗಾಯ ನೋವುಗಳೂ ಆದಂತೆ ಕಾಣಲಿಲ್ಲ.

ಈ ಹೊತ್ತಿಗೆ ಭಟನ ಬಾಯಿಯಿಂದ ಮಾತುಗಳು ಕೇಳಿಸಲಾರಂಭಿಸಿದವು. ಆತನು ತನ್ನ ಎರಡೂ ಕೈಗಳನ್ನು ಜೋಡಿಸಿ ಬಾಗಿ ನೆಲವನ್ನು ಮುಟ್ಟಿ ಮಹಾರಾಜರಿಗೂ ಮಹಾಜನಗಳಿಗೂ ನಮಸ್ಕಾರಗಳನ್ನು ಸಲ್ಲಿಸಿ ಹೀಗೆ ನುಡಿದನು:

"ವಿಜಯನಗರದ ಮಹಾಸಿಂಹಾಸನಾಧೀಶರಿಗೆ ಪ್ರಣಾಮಗಳು. ಇಲ್ಲಿ ನೆರೆದ ಮಹಾಜನಗಳಿಗೆ ವಂದನೆಗಳು.

"ನಾನೊಬ್ಬ ಯಃಕಶ್ಚಿತನು. ತಮ್ಮ ನೆರೆಯ ನಾಡಾದ ಆಂಧ್ರದೇಶದ ರಾಯಭಾರಿಯೊಂದಿಗೆ ಅನಾಮಂತ್ರಿತನಾಗಿ ಐತಂದ ಕತ್ತಿಯ ಬಂಟ.

"ಮೊದಲು ತಮ್ಮೆಲ್ಲರಲ್ಲಿ ನಾನು ವಿನಯಪೂರ್ವಕವಾಗಿ ಕ್ಷಮೆಯನ್ನು ಕೋರುವೆ. ಸಭಾನಿಯಮವನ್ನು ಮೀರಿ ಆಗಂತುಕನಾಗಿ ಮುಂದು ನುಗ್ಗಿದುದು ನನ್ನ ಒಂದನೆಯ ಅಪರಾಧ. ತಮ್ಮನ್ನು ಕೆಣಕಿ ಕೆರಳಿಸಿದುದು ಎರಡನೆಯ ಅಪರಾಧ. ನನ್ನೀ ದ್ವಿವಿಧ ಅಪರಾಧದ ಅಧಿಕ ಪ್ರಸಂಗವನ್ನು ತಾವು ತಾಳ್ಮೆಯಿಂದ ಸೈರಿಸಿದಿರಿ. ವಿವಿಧ ವಿನೋದಾವಳಿಯ ಈ ಸಂದರ್ಭದಲ್ಲಿ ನಾನು ತೋರಿಸಿದ 'ವೀರ ಪರೀಕ್ಷಾ ನಾಟಕ'ವನ್ನು ಶಾಂತವಾಗಿ ಈಕ್ಷಿಸಿದಿರಿ.

"ವಿಜಯನಗರವು ವೀರರ ಸಾಮ್ರಾಜ್ಯವೆಂಬ ಸತ್ಯವು ಹಲವಾರು ರಣ ರಂಗಗಳ ಕೋಲಾಹಲದಲ್ಲಿ ಪುನಃ ಪುನಃ ಪ್ರಸ್ಥಾಪಿತವಾಗಿದೆ. ಆದರೂ ಇಂದು ಈ ಮಾನೋಮಿಯ ಶಾಂತಿಮಯ ರಂಗದಲ್ಲಿ ಬೇರೊಂದು ಬಗೆಯಿಂದ ಅದು ನಿದರ್ಶನಕ್ಕೆ ಬಂದಿತು. ನನ್ನೀ ವೀರಪರೀಕ್ಷೆ ಆರಂಭದಲ್ಲಿ ಉಗ್ರ ಭೀಕರವಾಗಿದ್ದರೂ ಮುಗಿತಾಯದಲ್ಲಿ ಆನಂದರಮಣೀಯವಾಯಿತು ಎಂಬ ಸಂಗತಿಯನ್ನು ತಮ್ಮಗಳಿಗೆ ಅರಿಕೆ ಮಾಡಲು ಬಯಸುತ್ತೇನೆ.

" ಆ ನನ್ನ ಕಿರುಗತ್ತಿ ನಿಜವಾದ ಆಯುಧವಲ್ಲ. ಅದೊಂದು ಮಾಯಾ ಖಡ್ಗ. ಅದೀಗ ಅಲ್ಲಿ ಹೇಗೆ ಮುರಿದು ಮೂಲೆಗುಂಪಾಗಿ ಬಿದ್ದಿದೆ ನೋಡಿ! ಅದನ್ನು ನಾನು ಅಭ್ರಕ, ಜರಿಗೆ, ಬೇಗಡಿ ಮುಂತಾದ ವಸ್ತುಗಳಿಂದ ಸಿದ್ಧ ಪಡಿಸಿದ್ದೆನು. ಅದರಲ್ಲಿ ಕೆಂಪು ಬಣ್ಣವನ್ನು ತುಂಬಿದ್ದೆನು. ನಿಮ್ಮ ವೀರನ ಮೈತುಂಬ ಹರಿದ ಕೆನ್ನೀರ ಕಾಲುವೆ ನೆತ್ತರವಲ್ಲ; ಆ ಕತ್ತಿಯಲ್ಲಿ ತುಂಬಿದ್ದ ಬಣ್ಣದ ನೀರು. ವಸ್ತುಸ್ಥಿತಿ ಹೀಗಿದ್ದರೂ ಇದನ್ನು ಅರಿಯದೆ ಈ ಅಲಗಿಗೆ ಎದೆ ಯೊಡ್ಡಿದ ವೀರನ ಎದೆಗಾರಿಕೆ ಪ್ರಶಂಸಾರ್ಹವಾದುದು. ಆ ವೀರನಿಗೆ ನನ್ನ ನಮಸ್ಕಾರಗಳು."

ಸಭಿಕರೆಲ್ಲರು ಆಶ್ಚರ್ಯ ಮತ್ತು ಆನಂದದ ಹೊನಲಿನಲ್ಲಿ ತೇಲಾಡಿ ದರು. ಎದೆಯೊಡ್ಡಿದ ವೀರನಾದರೂ ಆ ಭಟನ ಚಾತುರ್ಯವನ್ನು ಹೊಗಳಿ ಆತನನ್ನು ವಂದಿಸಿ ತನ್ನ ಸ್ಥಳಕ್ಕೆ ಹೊರಟುಹೋದನು. ಹೀಗೆ ಮೊದಲು ಹೊಗೆಯಾಗಿ ಕಂಡದ್ದು ನಿಜವಾಗಿ ಹೊಗೆಯಾಗದೆ ನಗೆಯಾಗಿ ಕೊನೆಗೊಂಡಿತು.

ಸ್ವಲ್ಪ ಹೊತ್ತಾದ ಬಳಿಕ ಆ ರಾಜಸಭೆಯಲ್ಲಿ ಆ ವೀರರಿಬ್ಬರಿಗೆ ಯಥೋಚಿತವಾಗಿ ಸನ್ಮಾನವನ್ನು ಸಲ್ಲಿಸಲಾಯಿತು. ಒಂದು ಆಯಕಟ್ಟಿನ ಸಂದರ್ಭದಲ್ಲಿ ಮುಂದು ಬಂದು ವಿಜಯನಗರದ ಕೀರ್ತಿಗೌರವವನ್ನು ಎತ್ತಿ ಹಿಡಿದ ಆ ಎದೆಗಾರ ವೀರನನ್ನು ಮಂತ್ರಿಯು ಮನಸಾರೆ ಹೊಗಳಿ ಆತನಿಗೆ ಧನ್ಯವಾದಗಳನ್ನು ಅರ್ಪಿಸಿದನು.

ಮುಂದೆ ಅಂದಿನ ವಿವಿಧ ವಿನೋದಾವಳಿಯ ಬೇರೆ ಕಾರ್ಯಕ್ರಮಗಳು ನಡೆದವು. ಆದರೆ ಅವು ಈ ವಿನೋದ ನಾಟಕದ ಮುಂದೆ ಸಭಿಕರಿಗೆ

ಸಪ್ಪೆಯಾಗಿ ತೋರಿದುವು. ವೀರ ಪರೀಕ್ಷೆಯ ಈ ವಿನೋದ ನಾಟಕದ ಸ್ಮೃತಿ ವಿಜಯನಗರದ ಜನಗಳಲ್ಲಿ ಮುಂದೆ ಬಹುಕಾಲ ಜಾಗೃತವಾಗಿ ಉಳಿದುಕೊಂಡಿತು.

ವಿಜಯನಗರದ ಗೌರವವನ್ನು ಕಾಪಾಡಿದ ಆ ವೀರನು ಗುಮ್ಮನಾಯ ಕನ ಪಾಳ್ಯ ಎಂಬ ಚಿಕ್ಕ ಸಂಸ್ಥಾನದ ದೊರೆ ಕದಿರಪ್ಪ ನಾಯಕ, ಎಂಬ ಸಂಗತಿ ಅಂದಿನ ಸಭೆಯಲ್ಲಿ ಪ್ರಕಟವಾಯಿತು. ಈ ಸಂನಿವೇಶದ ಮೂಲಕ ಆ ಪಾಳೆಯ ರಾಜ್ಯವು ವಿಜಯನಗರ ಸಾಮ್ರಾಜ್ಯದಲ್ಲಿ ಒಂದು ಪ್ರತಿಷ್ಠೆಯ ಸ್ಥಾನವನ್ನು ಗಳಿಸಿಕೊಂಡಿತು. ಆ ರಾಜ್ಯದ ನಾಯಕ ದೊರೆಗಳು ಹೆಚ್ಚಿನ ಅಧಿಕಾರಗಳನ್ನು ಪಡೆದು ಜನಾಂಗದ ವಿಶ್ವಾಸಕ್ಕೆ ಪಾತ್ರರಾದರು.

---

## ಕತೆ ಮೂರು

# ನಾಗರ ಮರಿ



ಕೆಳದಿಯ ಅರಸರಲ್ಲಿ ಗಣ್ಯನಾದ ದೊಡ್ಡ ಸಂಕಣ್ಣನಾಯಕನು ೧೬ನೆಯ ಶತಮಾನದ ಮಧ್ಯದಲ್ಲಿ ರಾಜ್ಯಭಾರ ಮಾಡಿದನು. ಅನಂತರ ತನ್ನ ತಮ್ಮನಿಗೆ ಅರಸುತನವನ್ನು ಬಿಟ್ಟುಕೊಟ್ಟು ತೀರ್ಥ ಸಂಚಾರಕ್ಕಾಗಿ ಹೊರಟನು. ಜಂಗಮ ವೇಷದಲ್ಲಿ ದೇಶಪರ್ಯಟನ ಮಾಡುತ್ತ, ದಿಲ್ಲಿ ರಾಜಧಾನಿಗೆ ಬಂದು, ಅಲ್ಲಿ ಉನ್ಮತ್ತನಾದ ಒಬ್ಬ ಸರದಾರನನ್ನು ದ್ವಂದ್ವಯುದ್ಧದಲ್ಲಿ ಆಹ್ವಾನಿಸಿ, ವಧೆ ಮಾಡಿದನು. ಸಾಹಸದ ಈ ವೃತ್ತಾಂತ ವನ್ನು ಇಲ್ಲಿ ವರ್ಣಿಸಿದೆ.

[ ೧ ]

"ಎಲ! ಯಾರವರು ಅತ್ತ?"

"ನೀನು ಯಾರು ನಮ್ಮನ್ನು ಹೀಗೆ ಕೇಳಲಿಕ್ಕೆ?"

"ನನ್ನನ್ನೇ ತಿರುಗಿ ಪ್ರಶ್ನೆಮಾಡುವ ನಿಮ್ಮ ಧೈರ್ಯ ಹೆಚ್ಚಿನದು! ನಾನು ಯಾರು ಎಂಬುದು ಈ ದಿಲ್ಲಿ ಪಟ್ಟಣಕ್ಕೇ ತಿಳಿಯುವುದು."

"ನಾವು ಯಾರು ಎಂಬುದನ್ನು ಪ್ರಪಂಚವೇ ಅರಿಯುವುದು."

"ಸುಮ್ಮನೆ ಮಾತನ್ನು ಬೆಳೆಸಬೇಡಿ. ದಿಲ್ಲಿ ಸುಲ್ತಾನರ ಅರಮನೆಯ ಮುಖ್ಯ ಕಾವಲುಗಾರನು ನಿಮ್ಮನ್ನು ಸಂಧಿಸಿದ್ದಾನೆ. ಜೋಕೆ!"

"ವೇಷವನ್ನು ನೋಡಿದರೆ ನಾವು ಜಂಗಮ ಬೈರಾಗಿ ಎಂದು ನಿನಗೆ ತಿಳಿಯುವುದಿಲ್ಲವೇನಯ್ಯ?"

"ತಿಳಿದೇನು? ಬೈರಾಗಿಗಳಿಗೆ ಈ ಅರಮನೆಯ ಹತ್ತಿರ ಏನು ಕೆಲಸ?"

"ಅಲ್ಲ, ನಿಮ್ಮ ಬಾದಶಹರ ರಾಜಭವನವು ಎಷ್ಟು ಸೊಗಸಾಗಿದೆ! ಅದನ್ನು ಈ ಹೆಬ್ಬಾಗಿಲ ಬಳಿ ನಿಂತುಕೊಂಡು ಸುಮ್ಮನೆ ನೋಡುತ್ತಿದ್ದೇನೆ. ನೋಡಕೂಡದೇನು?"

"ಪರವಾ ಇಲ್ಲ; ನೋಡಿ. ನೋಡಿ ಹೀಗೇ ಹೊರಗಿನಿಂದ ಹೊರಗೆ ಬೇಗ ಹೋಗಿಬಿಡಿ."

ಈ ಸಂಭಾಷಣೆ ಬೆಳಗಿನಲ್ಲಿ ದಿಲ್ಲಿ ಸುಲ್ತಾನನ ಅರಮನೆಯ ಸಂರಕ್ಷಕ ಮುಖ್ಯಾಧಿಕಾರಿ ಮತ್ತು ಜಂಗಮ ಬೈರಾಗಿ ಇವರ ನಡುವೆ ನಡೆಯಿತು. ಬೈರಾಗಿಯ ಜೊತೆಯಲ್ಲಿ ಆತನಂತೇ ಉಡುವನ್ನು ಧರಿಸಿದ ಅನುಯಾಯಿಗಳಿಬ್ಬರು ಇದ್ದರು.

ನೋಡುತ್ತ ನೋಡುತ್ತ ಬೈರಾಗಿಗಳ ದೃಷ್ಟಿ ಆ ಬಾಗಿಲ ಮೇಲುಗಡೆ ಕಟ್ಟಿದ್ದ ಎರಡು ವಸ್ತುಗಳ ಮೇಲೆ ನಟ್ಟುನಿಂತಿತು. ಒಂದು ಕಠಾರಿ; ಇನ್ನೊಂದು ಏನೋ ಬರೆಹವುಳ್ಳ ಬೆಳ್ಳಿಯ ತಗಡು. ಇವು ಬಾಗಿಲ ತಲೆಕಟ್ಟಿನ

ಮೇಲೆ ನೇತಾಡುತ್ತಿದ್ದುವು. ಹಿರಿಯ ಬೈರಾಗಿಯ ಅಪ್ಪಣೆಯಂತೆ ಆತನ ಅನುಯಾಯಿ ಒಂದು ಕಂಬದ ಮೇಲೆ ಹತ್ತಿ, ಆ ಕತ್ತಿ ಮತ್ತು ಶಾಸನದ ತಗಡನ್ನು ಕೆಳಗೆ ತೆಗೆಯಹೋದನು.

ಅಷ್ಟರಲ್ಲಿ ಆ ಕಾವಲಧಿಕಾರಿಯ ನೋಟವು ಈ ಕಡೆ ಹೊರಳಿತು. ಆತನು "ಹಾಂ! ಬೇಡ, ಬೇಡ; ಎಚ್ಚರ, ಖಬರದಾರ್!!" ಎಂದು ಕೂಗುತ್ತ ಓಡಿ ಬಂದನು. ಆದರೆ ಆತನು ಬರುವುದರೊಳಗೆ ಆ ಅನುಯಾಯಿ ಆ ವಸ್ತುಗಳನ್ನು ತಂದು ತನ್ನ ನಾಯಕನ ಕೈಯಲ್ಲಿ ಕೊಟ್ಟುಬಿಟ್ಟಿದ್ದನು.

"ಇದೇನು ಅನರ್ಥ! ಘಾತವಾಯಿತು!!" ಎಂದು ಆ ಕಾವಲ ನಾಯಕನು ದೊಡ್ಡ ಬೈರಾಗಿಯನ್ನು ನೋಡುತ್ತ ಗದ್ದರಿಸಿದನು.

"ಏಕಪ್ಪ, ನಿನಗೆ ಇಷ್ಟು ಗಾಬರಿ! ಅವೇನು ಅನರ್ಥ?" ಎಂದು ಮುಖ್ಯ ಬೈರಾಗಿ ಆ ಬರೆಹವನ್ನು ಓದುತ್ತ ಶಾಂತವಾಗಿ ಪ್ರಶ್ನೆಮಾಡಿದನು.

"ಅನರ್ಥವೆಂದು ಕೇಳುವಿರಾ? ಬೈರಾಗಿ ಮಹಾರಾಜ! ಆ ಕಥೆ ನಿಮಗೆ ತಿಳಿಯದು. ನೀವು ಈ ರಾಜಧಾನಿಗೆ ಇದೀಗ ಬಂದಿರುವಂತೆ ತೋರುತ್ತದೆ. ಅಯ್ಯೋ ಪಾಪ! ನಿಮಗೆ ಹೇಗೆ ತಿಳಿಯಬೇಕು! ಅವು ಖಾನಸಾಹೇಬರ ಬಿಂಕದ ಬಿರುದಿನ ಕುರುಹುಗಳು. ಅವುಗಳಿಗೆ ಕೈ ಹಚ್ಚುವುದೆಂದರೆ ಯಮರಾಜನ ದೂತರಿಗೆ ಸಂಚಕಾರ ಕೊಟ್ಟಂತೆ!" ಕಾವಲ ನಾಯಕನು ಸಿಡಿಮಿಡಿಗೊಳ್ಳುತ್ತ ಉತ್ತರಿಸಿದನು.

"ಜಮಾದಾರಸಾಹೇಬ! ಹಾಗಂದರೇನು? ಆ ಕಥೆಯನ್ನು ಕೊಂಚ ವಿವರವಾಗಿ ಹೇಳಿ, ನೋಡುವ." ದೊಡ್ಡ ಬೈರಾಗಿ ವಿಚಾರಿಸಿದನು.

"ಆ ಕಥೆಯನ್ನು ನೀವು ತಿಳಿದುಕೊಳ್ಳಲೇಬೇಕಾಗಿದೆ. ಮಾತ್ರವಲ್ಲ. ನಿಮ್ಮ ಕೃತಿಯ ಘೋರ ಪರಿಣಾಮವನ್ನೂ ಅನುಭವಿಸಲೇಬೇಕಾಗಿದೆ. ಇದಕ್ಕೆ ವಿಮೋಚನೆ ಇಲ್ಲ. ಬೈರಾಗಿ ಮಹಾರಾಜ! ನಿಮಗೇಕೆ ಬೇಕಾಗಿತ್ತು ಈ ಕುಚೋದ್ಯತನ? ಸುಮ್ಮನೆ ಅರಮನೆಯನ್ನು ನೋಡಿಕೊಂಡು ಹೋಗಿದ್ದರೆ ಆಗುತ್ತಿರಲಿಲ್ಲವೆ? ಬಡಪಾಯಿ ಫಕೀರರು ನೀವು. ಈ ಸಾಹಸದಿಂದ ಮಾರಿಯ ದವಡೆಯಲ್ಲಿ ಕೈಯಿಕ್ಕಿರುವಿರಿ! ಇನ್ನೇನು ಮಾಡುವುದು?"

" ಸುಮ್ಮನೆ ಮರುಗಬೇಡಿ, ಜಮಾದಾರಸಾಹೇಬ! ನಮ್ಮ ಹೊಣೆಯ ಅರಿವು ನಮಗೆ ಇದ್ದೇ ಇದೆ. ಮಾರಿಯೇನು? ಮಾರಿಯ ತಾತನ ಭಯವೂ ನಮಗಿಲ್ಲ. ಇದೇನು ಸಮಾಚಾರ ಎಂಬುದನ್ನು ಬೇಗ ಹೇಳಿ. ಇದು ಅಂಕುಶಖಾನನೆಂಬವನು ಕೆತ್ತಿಸಿದ ಶಾಸನವೆಂಬಂತೆ ತೋರುತ್ತದೆ."

" ಮೆತ್ತಗೆ ಮಾತಾಡಿ, ಬೈರಾಗಿ ಮಹಾರಾಜ! ಆ ಖಾನಸಾಹೇಬರ ಹೆಸರನ್ನು ಉಚ್ಚರಿಸುವ ಶಕ್ತಿ ಈ ರಾಜ್ಯದಲ್ಲಿ ಯಾರಿಗೂ ಇಲ್ಲ. (ಕೆಳದನಿಯಲ್ಲಿ) ಸ್ವತಃ ಬಾದಶಹರು ಕೂಡ ಆತನ ಗೊಡವೆಗೆ ಹೋಗುವುದಿಲ್ಲ."

" ಅಂತಹ ಪರಾಕ್ರಮಿಯೇ ಆತನು?"

" ಸಂದೇಹವೇನು? ದಿಲ್ಲಿ ಸುಲ್ತಾನರ ಸಾಮಂತ ಸರದಾರರಲ್ಲಿ ಪ್ರಮುಖನಾದ ಈತನು ಹೆಸರಿಗೆ ಸಾಮಂತ ಸರದಾರನು. ಈತನು ಬಾದಶಹರಿಂದ 'ಸಮಶೇರ ಜಂಗಬಹದ್ದೂರ್' ಎಂಬ ಬಿರುದನ್ನು ಪಡೆದಿರುವನು. ಆತನ ಸ್ವರೂಪವನ್ನು ನೋಡಿದರೆ ಏನನ್ನುವಿರೋ ನೀವು? ಅನ್ನುವುದೇನು? ಒಂದು ಹರದಾರಿ ದೂರಕ್ಕೆ ಓಡಿ ಹೋಗುವಿರಿ!"

" ಓ, ಅಂತಹ ಬಲಾಢ್ಯನೇ! ಬಹು ದಪ್ಪನಾಗಿರಬಹುದು. ಸರಿ, ಮುಂದೇನು? ಸಮಾಚಾರವನ್ನು ಬೇಗ ಹೇಳಿ ಮುಗಿಸಯ್ಯ."

" ಅದನ್ನೇ ಹೇಳುವೆ, ಕೇಳಿ. ನಿಮ್ಮ ಕೈಯಲ್ಲಿರುವ ಈ ಹತ್ಯಾರು ಈ ಖಾನನದು. ಅದನ್ನೂ ಈ ಶಾಸನವನ್ನೂ ಈ ಬಾಗಿಲಿಗೆ ಕಟ್ಟಿರುವ ಉದ್ದೇಶವು ಹೀಗೆ. ಅರಮನೆಗೆ ಹೋಗಿ ಬರುವವರೆಲ್ಲರು ಇವುಗಳ ಕೆಳಗೆ ಹಾಯ್ದು ಹೋಗಬೇಕಾದುದರಿಂದ ಎಲ್ಲರು ಖಾನನಿಗೆ ಕೀಳಾದವರು ಎಂಬ ಅಭಿಪ್ರಾಯ."

" ಮಾನವಂತರಿಗೆ ಇದು ಅಪಮಾನದ ಸಂಗತಿ; ಅಲ್ಲವೆ?"

" ಅಹುದು. ಆದರೆ ಮಾಡುವುದೇನು? ತಲೆಯೆತ್ತಿ ಅತನನ್ನು ತಿರುಗಿ ಕೇಳುವ ಶಕ್ತಿ ಯಾರಲ್ಲಿದೆ?"

" ಇದು ವಿಚಿತ್ರವಾದ ವರ್ತಮಾನ. ಇಂತಹ ಅನ್ಯಾಯವನ್ನು ನಿಮ್ಮ ಬಾದಶಹರು ಹೇಗೆ ಸಹಿಸುವರು? ಇದರಿಂದ ಅವರ ಕೀರ್ತಿಗೂ ಕುಂದಲ್ಲವೆ?"

"ಎಲ್ಲವೂ ನಿಜ; ಆದರೆ ಯಾರೇನು ಮಾಡುವರು? ಖಾನಸಾಹೇಬರ ದರ್ಪ ಸಾಧಾರಣವಲ್ಲ."

"ಅಬ್ಬ! ಅಂತಹ ಉನ್ಮತ್ತನೇ ಅವನು! ನಿನ್ನೀ ಕಥೆಯನ್ನು ಕೇಳಿ ನಿಮ್ಮ ಖಾನಸಾಹೇಬರನ್ನು ನೋಡಿಯೇ ತೀರಬೇಕು ಎಂಬ ಆಸೆ ನಮಗೆ ಉಂಟಾಗಿದೆ."

"ಬೇಡ ಬೇಡ; ಆ ಮಾತು ನಿಮಗೆ ಬೇಡ. ಇನ್ನೂ ಒಂದು ವಿಷಯ ನಿಮಗೆ ಹೇಳತಕ್ಕದ್ದಿದೆ. ಖಾನಸಾಹೇಬರ ಬಿರುದಿನ ಈ ವಸ್ತುಗಳಿಗೆ ಕೈ ಹಚ್ಚುವುದೆಂದರೆ ಆತನನ್ನು ಪ್ರತ್ಯಕ್ಷವಾಗಿ ಯುದ್ಧಕ್ಕೆ ಆಹ್ವಾನಿಸಿದಂತೆ. ತನ್ನ ಕೂಡ ಕಾದುವ ಧೈರ್ಯವುಳ್ಳವರು ಮಾತ್ರ ಇವುಗಳ ಗೊಡವೆಗೆ ಹೋಗಬೇಕು, ಎಂದು ಆತನ ಕಟ್ಟಪ್ಪಣೆ ಇದೆ. ಈ ಶಾಸನದಲ್ಲಿಯೂ ಹಾಗೆ ಬರೆದಿದೆ."

"ಹಾಗಾದರೆ ನಾವು ಮಾಡಿದ್ದು ಯುಕ್ತವೇ ಆಯಿತು. ಇದುವೇ ನಿಮ್ಮ ಖಾನನಿಗೆ ನಮ್ಮ ಆಹ್ವಾನ. ಈ ಮೂಲಕ ನಾವು ಖಾನಸಾಹೇಬರನ್ನು ಅನಾಯಾಸವಾಗಿ ಕಂಡಂತೆ ಆಗುವುದು ಮಾತ್ರವಲ್ಲದೆ, ಈ ದಿಲ್ಲಿ ರಾಜ್ಯದಲ್ಲಿಯ ಒಂದು ಅನ್ಯಾಯವನ್ನು ದೂರ ಮಾಡುವ ಅವಕಾಶವೂ ನಮಗೆ ದೊರೆಯುವುದು."

"ಇನ್ನೊಮ್ಮೆ ಹೇಳುವೆ, ಬೈರಾಗಿ ಮಹಾರಾಜ! ಆ ವಿಚಾರವೇ ಬೇಡ ನಿಮಗೆ. ಬೇರೊಬ್ಬರು ನೋಡುವುದಕ್ಕೆ ಮುಂಚೆ ಈ ಕತ್ತಿ ಮತ್ತು ಶಾಸನವನ್ನು ಮೊದಲಿನ ಸ್ಥಳದಲ್ಲಿ ಕಟ್ಟಿಬಿಡಿ. ನಿಮ್ಮಂತಹ ಫಕೀರರಿಗೆ ಈ ಖಟಾಟೋಪವೇಕೆ? ಸುಮ್ಮನೆ ಹೊರಟು ಹೋಗಿರಿ. ಈ ಸುದ್ದಿಯನ್ನು ನಾನು ಯಾರ ಮುಂದೆಯೂ ಹೇಳುವುದಿಲ್ಲ. ಇಲ್ಲವಾದರೆ ನಿಮ್ಮ ಪ್ರಾಣಗಳು ಉಳಿಯುವ ಆಸೆಯೇ ಇಲ್ಲ."

"ಜಮಾದಾರ ಸಾಹೇಬ, ಖಚಿತವಾದ ಈ ಮಾತನ್ನು ಕೇಳಿ. ಮುಂದಿಟ್ಟ ಅಡಿಯನ್ನು ಹಿಂದೆಗೆಯುವುದು ನಮಗೆ ಗೊತ್ತಿಲ್ಲ. ಇದೀಗ ಹೇಳಿದಂತೆ ಇದು ಖಾನನಿಗೆ ನಮ್ಮ ಆಹ್ವಾನ. ಈ ವರ್ತಮಾನವನ್ನು ಕೂಡಲೆ

ನೀವು ಬಾದಶಹರಿಗೆ ಅರಿಕೆ ಮಾಡಿ, ಖಾನನ ನಮಾಗನು ಲಾಭವನ್ನು ಬೇಗನೆ ಪಡೆಯಬೇಕೆಂಬ ನಮ್ಮ ಅಭಿಪ್ರಾಯವನ್ನು ಸೂಚಿಸಿರಿ. ಊರ ಹೊರಗಿನ ಶಿವಮಂದಿರವೇ ಸದ್ಯದ ನಮ್ಮ ಬಿಡಾರ. ಹೋಗಿ ಬರುವೆವು."

ಇಂತು ನಿರ್ಧಾರದ ಮಾತುಗಳನ್ನು ಹೇಳಿ ಬೈರಾಗಿ ತನ್ನ ಅನುಚರ ರೊಡನೆ ವೇಗವಾಗಿ ಹೊರಟು ಬಿಟ್ಟನು. ಆತನ ವೀರವೃತ್ತಿಯನ್ನೂ ಉಗ್ರ ರೂಪವನ್ನೂ ನೋಡಿ ಕಾವಲನಾಯಕನು ಭಯಭೀತನಾದನು. ಅವರ ಹಿಂದೆ ಕೊಂಚ ದೂರಕ್ಕೆ ಹೋಗಿ ಆ ಕತ್ತಿ ಮತ್ತು ಶಾಸನವನ್ನು ಕಸಿದುಕೊಳ್ಳಲು ಆತನು ಪ್ರಯತ್ನಿಸಿದನು. ಆದರೆ ಪ್ರಯೋಜನವಾಗಲಿಲ್ಲ.

## [ ೨ ]

ಘುಡುಘುಡಿಸಿ ಸಿಡಿಲ್ಗಳ ಬರ-
ಸಿಡಿಲಿದಿರಾಂತುರೆ ಪಳಂಚುವಂತಿರೆ ಕೋಪಂ ।
ಕಿಡಿಯಿಡೆ ಘುಲ್ಲಿಸುತಸಿಗಳ-
ನಡಿ ಮಿಡುಕದೆ ನಿಲ್ಲು ಕಾದಿದರ್ ಭಟರಿರ್ವರ್ ॥

—ಕೆಳದಿನೃಪವಿಜಯಂ

ನಡುಗುತ್ತ ಬೆವರುತ್ತಾ ಕಾವಲನಾಯಕನು ಹೇಳಿದ ವಿಚಿತ್ರ ವರ್ತಮಾನವನ್ನು ಕೇಳಿ ಬಾದಶಹನು ಚಕಿತನಾದನು. ಅವನು ಇಂತಹ ಎಂಟೆದೆಯ ವೀರನೋ! ಇವನು ಯಾರಾಗಿರಬಹುದು, ಎಂದು ಯೋಚನೆಗೆ ಒಳಗಾದನು. ಆತನು ಜಂಗಮ ಬೈರಾಗಿ ಎಂಬುದನ್ನು ತಿಳಿದು ಬಾದಶಹನ ಆಶ್ಚರ್ಯವು ಇಮ್ಮಡಿಯಾಯಿತು. ಬೈರಾಗಿಗೆ ಹಿಂದುಸ್ತಾನಿ ಭಾಷೆ ಅಷ್ಟು ಚೆನ್ನಾಗಿ ಬರುವುದಿಲ್ಲ; ಆತನು ದಾಕ್ಷಿಣಾತ್ಯನಿರಬಹುದು; ಎಂಬ ಕಾವಲ ನಾಯಕನ ಸ್ಪಷ್ಟೀಕರಣದಿಂದ ಸುಲ್ತಾನನು ಇನ್ನಷ್ಟು ದಿಗಿಲುಗೊಂಡನು.

ಅಂಕುಶಖಾನನನ್ನು ಹೀಗೆ ಕೆಣಕುವವರು ಇದುವರೆಗೆ ಯಾರೂ ಸಿಕ್ಕಿರ ಲಿಲ್ಲ. ಕೊನೆಗೆ ಒಬ್ಬನಾದರೂ ಎಂತಹನಾದರೂ ದೊರೆತನಲ್ಲ, ಎಂದು ಸುಲ್ತಾನನಿಗೆ ಒಂದು ವಿಧದಿಂದ ಒಳಗೊಳಗೆ ಆನಂದವೇ ಆಯಿತು.

ಬಾದಶಹನು ಕೂಡಲೆ ದೂತನನ್ನು ಕಳುಹಿಸಿ ಅಂಕುಶಖಾನನಿಗೆ ಈ ವರ್ತಮಾನವನ್ನು ತಿಳಿಸಿದನು. ಇದನ್ನು ಕೇಳಿ ಖಾನನು ಕಿಡಿಕಿಡಿಯಾದನು. ತನಗೆ ಆಹ್ವಾನ ಕೊಟ್ಟವನು ಒಬ್ಬ ಜಂಗಮ ಬೈರಾಗಿ ಎಂದು ತಿಳಿದ ಬಳಿಕ ಖಾನನು ಹೆಚ್ಚಾಗಿ ರೇಗಿದನು. 'ಇದು ಬಾದಶಹನ ಕುತಂತ್ರವೇ ಆಗಿರಬೇಕು. ಬುದ್ಧಿಪೂರ್ವಕವಾಗಿ ತನಗೆ ಅಪಮಾನ ಮಾಡಲು ಆತನು ವೇಷಪರಿವರ್ತನ ಮಾಡಿಸಿ ಯಾರನ್ನೋ ಮುಂದು ಚಾಚಿರಬೇಕು' ಎಂಬ ಗ್ರಹಿಕೆಯನ್ನು ಇಟ್ಟುಕೊಂಡು, ಖಾನನು ಸ್ವಲ್ಪ ಹೊತ್ತು ಹುಚ್ಚನಂತೆ ಒದರಾಡಿದನು. ಈ ಹುಂಬನನ್ನು ಕಾಳಗದ ಕಣದಲ್ಲಿ ಕಾಣಲು ತಾನು ಬಹಳ ಆತುರಪಡುತ್ತಿದ್ದು, ಆತನನ್ನು ಸಂಧಿಸುವ ಏರ್ಪಾಡನ್ನು ಕ್ಷಿಪ್ರದಲ್ಲಿಯೇ ಮಾಡಬೇಕೆಂಬ ಆಶಯದ ಸೂಚನೆಯನ್ನು ಖಾನನು ಬಾದಶಹನಿಗೆ ತಿಳಿಸಿದನು.

ಅತ್ತ ಬಾದಶಹನ ಗುಪ್ತಚಾರರು ಬೈರಾಗಿಗಳನ್ನು ಹುಡುಕಿಕೊಂಡು ಹೋದರು. ಬಾದಶಹನು ಅವರ ಊಟಕ್ಕಾಗಿ ಬೇಕುಬೇಕಾದ ಅನ್ನ ಸಾಮುಗ್ರಿಯನ್ನು ಕಳಿಸಿದನು. ಅದರಲ್ಲಿ ಒಂದನ್ನೂ ಅವರು ತೆಗೆದುಕೊಳ್ಳಲಿಲ್ಲ. ಶಿವಾಲಯದ ಪಕ್ಕದ ಬಾವಿಯಲ್ಲಿ ಅವರು ಸ್ನಾನ ಮಾಡಿದರು. ಶಿವಪೂಜೆ, ಧ್ಯಾನ, ಜಪಗಳನ್ನು ಮುಗಿಸಿಕೊಂಡರು. ಬೆಳಗಿನಲ್ಲಿ ದಾಸೋಹದಿಂದ ಜೋಳಿಗೆಯಲ್ಲಿ ತಂದಿರಿಸಿದ ಹಿಟ್ಟಿನ ಅಡಿಗೆ ಮಾಡಿ ಊಟಮಾಡಿದರು. ಸ್ವಲ್ಪ ಹೊತ್ತು ವಿಶ್ರಾಂತಿ ಪಡೆದರು.

ಅಷ್ಟರಲ್ಲಿ ದೇವಾಲಯದ ಹತ್ತಿರ ಒಂದು ರಥವು ಬಂದು ನಿಂತಿತು. ಬಾದಶಹನು ತನ್ನ ಅರಮನೆಗೆ ಬರಬೇಕಾಗಿ ಅವರನ್ನು ಕೇಳಿಕೊಂಡಿದ್ದನು. ಆತನ ಸೂಚನೆಯನ್ನು ಮನ್ನಿಸಿ ಬೈರಾಗಿಗಳು ರಥದಲ್ಲಿ ಕುಳಿತು ರಾಜಮಂದಿರದತ್ತ ಪಯಣ ಮಾಡಿದರು.

ಬಾದಶಹನು ಕಾಯುತ್ತಿದ್ದನು. ಒಂದು ದಿವಾಣಖಾನೆಯಲ್ಲಿ ಅವರನ್ನು ಬರಮಾಡಿಕೊಂಡನು. ಕುಶಲ ಪ್ರಶ್ನೆಯಾದ ಬಳಿಕ "ತಾವು ಯಾರು ? ತಮ್ಮ ನಾಡು ಬೀಡು ಎಲ್ಲಿ ?" ಎಂದು ವಿಚಾರಿಸಿದನು.

"ನೋಡಿದ ಕೂಡಲೆ ನಾವು ಯಾರು ಎಂಬುದು ಗೊತ್ತಾಗುವುದು. ಲೌಕಿಕವನ್ನು ತೊರೆದವರಿಗೆ ಲೌಕಿಕರಂತೆ ಅಡ್ಡ ಉದ್ದ ಹೆಸರುಗಳು ಇರುವುದಿಲ್ಲ.

ಗ್ರಾಮೈಕರಾತ್ರಿಯಾಗಿ ಊರೂರು ತಿರುಗುವ ಬೈರಾಗಿಗಳಿಗೆ ನಾಡಾವುದು? ಬೀಡಾವುದು? ಹುಜೂರರು ನಮ್ಮನ್ನು ಕರೆಸಿದ ಉದ್ದೇಶವೇನು?" ಹಿರಿಯ ಬೈರಾಗಿ ಉತ್ತರಿಸಿದನು.

"ಸಾಧು ಮಹಾರಾಜ! ಲೌಕಿಕವನ್ನು ತೊರೆದಂತೆ ಹೇಳಿಕೊಳ್ಳುವ ತಮಗೆ ಲೋಗರ ಈ ಜಂಜಡವು ಏಕೆ ಬೇಕಾಗಿತ್ತು? ಅಹಿಂಸಾವ್ರತದ ಬೈರಾಗಿಗಳೆತ್ತ? ಕತ್ತಿಯ ಕಾಳಗದ ಘೋರ ಹಿಂಸಾಸತ್ರವೆತ್ತ? ಗೋಸಾವಿ ಎಂದೆನಿಸಿಕೊಳ್ಳುವ ತಾವು ಸಮಶೇರ ಜಂಗ ಬಹದ್ದೂರನಾದ ನಮ್ಮ ಖಾನನಿಗೆ ಯುದ್ಧದ ಆಹ್ವಾನವನ್ನು ಇತ್ತಿದ್ದೀರಿ." ಬಾದಶಹನು ವಿನಯದಿಂದ ಪ್ರಸ್ತಾವಿಸಿದನು.

"ಲೌಕಿಕವನ್ನು ತೊರೆದವರೂ ಒಂದೊಂದು ಸಂದರ್ಭದಲ್ಲಿ ಲೋಕಕ್ಷೇಮಕ್ಕಾಗಿ ಘೋರವಾದ ಲೌಕಿಕ ಕರ್ಮವನ್ನು ಮಾಡಬೇಕಾಗುತ್ತದೆ. ಇದರಲ್ಲಿ ಅಸಾಧುವಾದುದೇನೂ ಇಲ್ಲ." ದೊಡ್ಡ ಬೈರಾಗಿ ತನ್ನನ್ನು ಸಮರ್ಥಿಸಿದನು.

"ತಮ್ಮ ವೃತ್ತಿ ಮತ್ತು ಕೃತಿ ತಮ್ಮ ವೇಷಕ್ಕೆ ಅನುರೂಪವಾಗಿಲ್ಲ. ನೈಜ ಬೈರಾಗಿ ಕ್ಷಾತ್ರಕರ್ಮಕ್ಕೆ ಅನಭ್ಯಸ್ತನಾಗುವನು. ತಾವು ನಿಜವಾಗಿಯೇ ಖಾನನೊಡನೆ ಯುದ್ಧಮಾಡಲು ಇಷ್ಟಪಡುವಿರಾ?" ಬಾದಶಹನು ತೂಕ ಹಿಡಿದು ಮಾತನಾಡಿದನು.

"ನಿಜವಾಗಿಯೇ; ಸಂದೇಹವೇಕೆ?" ಬೈರಾಗಿ ಗಡುಸಾಗಿ ಹೇಳಿದನು.

"ಹಾಗಾದರೆ ಸ್ವಲ್ಪ ಹೊತ್ತು ಇಲ್ಲಿಯೇ ವಿಶ್ರಮಿಸಿಕೊಳ್ಳಬಹುದು. ಯುದ್ಧದ ಸಿದ್ಧತೆ ಮುಗಿದಿದೆ. ಖಾನನೂ ತಮ್ಮನ್ನು ಕಣದಲ್ಲಿ ಕಾಣಲು ಉತ್ಸುಕನಾಗಿರುವನು. ಇದೀಗ ತಮ್ಮನ್ನು ಅತ್ತ ಕರೆಯಕಳುಹುವೆವು." ಎಂದು ಹೇಳಿ ಬಾದಶಹನು ಹೊರಟುಹೋದನು.

ಅರಮನೆಯ ಮುಂದಣ ವಿಸ್ತಾರವಾದ ಬಯಲಲ್ಲಿ ದ್ವಂದ್ವಯುದ್ಧವು ನಡೆಯಬೇಕೆಂದು ಗೊತ್ತಾಗಿತ್ತು. ಸಮಯ ಅಪರಾಹ್ಣ ನಾಲ್ಕುಗಂಟೆ.

ಬಾದಶಹ, ಸಾಮಂತ ಸರದಾರರು ಮತ್ತು ರಾಜ್ಯಾಧಿಕಾರಿಗಳು, ಇವರುಗಳಿಗಾಗಿ ಅವರವರ ಪದವಿಯಂತೆ ಆಸನಗಳನ್ನು ರಚಿಸಿದ್ದರು. ಸಾಮಾನ್ಯ ನಾಗರಿಕ ಮತ್ತು ಪ್ರೇಕ್ಷಕರಿಗಾಗಿಯೂ ತಕ್ಕ ವ್ಯವಸ್ಥೆಯನ್ನು ಮಾಡಿದ್ದರು.

ದಿಲ್ಲಿಯ ನಗರವಾಸಿಗಳಿಗೆ ಇದೊಂದು ಅಪೂರ್ವ ಸನ್ನಿವೇಶ. ಇದನ್ನು ನೋಡಲು ಜನಸಂಮರ್ದವು ಬಹುವಾಗಿ ನೆರೆಯಿತು. ನಿರ್ದಿಷ್ಟ ಸಮಯಕ್ಕೆ ಮುಂಚಿತವಾಗಿ ಎಲ್ಲರೂ ಬಂದುಬಿಟ್ಟರು. ಬಾದಶಹ ಮತ್ತು ಸರದಾರರು ತಮ್ಮ ತಮ್ಮ ಸ್ಥಳಗಳನ್ನು ಅಲಂಕರಿಸಿದರು. ಬೈರಾಗಿಗಳು 'ಪ್ರದರ್ಶನ ಬೇಡ'ವೆಂದು ಒಂದು ಮೂಲೆಯಲ್ಲಿ ಹೋಗಿ ಕುಳಿತರು. ಅಷ್ಟರಲ್ಲಿ ಒಂದು ಧ್ವನಿಯ ಗೊಂದಲವು ಆ ಸಭಾಂಗಣದ ಕಡೆಗೆ ನುಗ್ಗುತ್ತ ಬರುವಂತೆ ಕೇಳಿಸಿತು.

ಹತ್ತಿರಕ್ಕೆ ಬಂದಂತೆ 'ಹೋಂ–ಹೋಂ' ಎಂಬ ಪಲ್ಲಕ್ಕಿಯನ್ನು ಹೊತ್ತ ಭೋಯಿಗಳ ಹುಂಕಾರವು ಸ್ಪಷ್ಟವಾಯಿತು. ಭಟ್ಟಂಗಿಗಳು ಹೊಗಳುವ 'ಅಂಕುಶಖಾನ್ ಸಮಶೇರ ಜಂಗಬಹದ್ದೂರ್ ಬರಕತ ರಹೇ! ಬರಕತ ರಹೇ!' ಎಂಬ ಜಯಘೋಷವು ಸ್ಫುಟವಾಯಿತು. 'ಖಾನನು ಬಂದನು' ಎಂದು ಎಲ್ಲರು ತಮ್ಮ ತಮ್ಮೊಳಗೆ ಮಾತಾಡಿಕೊಂಡರು.

ಎಂಟು ಜನ ಭೋಯಿಗಳು ಹೊತ್ತು ತಂದ ಪಲ್ಲಕ್ಕಿ ಸಭೆಯ ಮಧ್ಯದಲ್ಲಿ ಬಂದು ನಿಂತಿತು. ಕಪ್ಪು ಬಣ್ಣದವನೂ ಸ್ಥೂಲಕಾಯನೂ ಆಜಾನುಬಾಹುವೂ ಆದ ಪುರುಷನು ಹೊರಗೆ ಇಳಿದು ಬಂದನು. ಆತನು ಪಾದದಲ್ಲಿ ಕುಸುರಿನ ಜೋಡನ್ನು ಧರಿಸಿದ್ದನು. ನೀಲಿಬಣ್ಣದ ರೇಸಿಮೆಯ ನಿರಿಗೆಯ ಚೆಲ್ಲಣವನ್ನು ಉಟ್ಟಿದ್ದನು. ಜರದಂಚಿನ, ಹಸಿರುಬಣ್ಣದ, ಮಖಮಲ್ಲಿನ ನಿಲುವಂಗಿಯನ್ನು ತೊಟ್ಟಿದ್ದನು. ಕೆಂಪಿನ ತುರಾಯಿ ಹಚ್ಚಿದ, ಕೇಸರಿ ಬಣ್ಣದ, ಗುಮ್ಮಟದಂತಹ ಪಗಡಿ ಆತನ ಶಿರೋಭಾಗದಲ್ಲಿ ಶೋಭಿಸುತ್ತಿತ್ತು. ಇಕ್ಕೆಲದ ಸೇವಕರ ಮೇಲೆ ತನ್ನ ಭುಜಗಳ ಭಾರವನ್ನು ಹಾಕಿ, ಆತನು ಮದದಾನೆಯಂತೆ ತೂಗುತ್ತ ತೊನೆದಾಡುತ್ತ ಬಾದಶಹನು ಕೂತಲ್ಲಿಗೆ ಬಂದನು.

ಬಾದಶಹನು ಎದ್ದು ಆತನನ್ನು ಆದರದಿಂದ ಬರಮಾಡಿಕೊಂಡು ತನ್ನ ಪಕ್ಕದ ಆಸನದಲ್ಲಿ ಕುಳ್ಳಿರಿಸಿದನು. ಎರಡು ನಿಮಿಷಗಳು ಆಗುವಷ್ಟರಲ್ಲಿ ಖಾನನು ಎದ್ದು ನಿಂತು ತನ್ನ ಪೌರುಷವನ್ನು ಕೊಚ್ಚಿಕೊಳ್ಳಲು ಆರಂಭಿಸಿದನು. "ನನ್ನಂತಹ ಶೂರರು ಈ ಪ್ರಪಂಚದಲ್ಲಿ ಯಾರೂ ಇಲ್ಲ. ನಾನು ಇಂತಿಂತಹ ಸರದಾರರನ್ನು ಉರುಳಿಸಿದ್ದೇನೆ. ನನ್ನ ಮುಂದೆ ನಿಲ್ಲಲಾರದೆ ಇಂತಿಂತಹ ಬಲಿಷ್ಠರು ಸೋತು ಓಡಿಹೋಗಿದ್ದಾರೆ. ಹೀಗಿರಲು ಯಾವನೋ ಒಬ್ಬ ಯಃಕಶ್ಚಿತ್ ತಲೆತಿರುಕನು ಇದೀಗ ನನ್ನನ್ನು ಕೆಣಕಿದ್ದಾನೆ. ಇದು ನನಗೆ ಬಹಳ ಮಾನಹಾನಿಕರ! ಆದರೂ ಕ್ಷುದ್ರನ ಸಮಾಚಾರವನ್ನು ಇಂದಿನ ರಣರಂಗದಲ್ಲಿ ಮುಗಿಸಿಯೇ ಬಿಡುವೆನು. ಇಲಿಯು ತನ್ನ ಹೋರಿನಲ್ಲಿ ಜೀವಿಸಲಾರದೆ ಹುಲಿಯೊಡನೆ ಅಧಿಕ ಪ್ರಸಂಗಮಾಡಿದರೆ ಅದರ ಗತಿ ಯಾವುದು? ಸಿಂಹವನ್ನು ಸರಿಗಟ್ಟಲು ಹೋದ ಗ್ರಾಮಸಿಂಹವು ಬಾಳುವುದೆಂತು?" ಮುಂತಾಗಿ ಸ್ವೈರಾಲಾಪ ಮಾಡಿದನು. ಕೊನೆಗೆ "ನನ್ನನ್ನು ಕೆರಳಿಸಿದ ಆ ಪೋಕರಿ ಎಲ್ಲಿ?" ಎಂದು ಬಾದಶಹನಿಗೆ ಪ್ರಶ್ನೆಮಾಡಿದನು.

ಬಾದಶಹನ ಸೂಚನೆಯ ಮೇರೆಗೆ ಆತನ ಚೋಪದಾರನು ಎದ್ದು "ಬೈರಾಗಿ ಮಹಾರಾಜ, ಬೈರಾಗಿ ಮಹಾರಾಜ," ಎಂದು ಕೂಗಿದನು.

ಮರುಕ್ಷಣದಲ್ಲಿ ಸಭಾಂಗಣದ ಕಡೆಗೆ ಒಬ್ಬ ಸಾಧುಪುರುಷನು ನಡೆದು ಬಂದನು. ಆತನ ತಲೆಯಲ್ಲಿ ಜಡೆ; ಹಣೆಗೆ ಭಸ್ಮದ ಪಟ್ಟೆಗಳು; ಕೊರಳಲ್ಲಿ ರುದ್ರಾಕ್ಷಿಸರ; ಕೈಯಲ್ಲಿ ತ್ರಿಶೂಲದಂತಹ ದಂಡ ಇದ್ದಿತು. ಕಾವಿ ಬಟ್ಟೆಯ ಉದ್ದನೆಯ ಅಂಗಿಯೊಂದು ಆತನ ದೇಹದ ಬಹುಭಾಗವನ್ನು ಮುಚ್ಚಿದ್ದಿತು. ಆತನ ಮುಖವು ತೇಜಸ್ವಿಯಾದುದು; ಮೈಬಣ್ಣವು ತಿಳಿಯಾದುದು. ಆತನ ನಿಲುವು ಮಧ್ಯಮವಾಗಿದ್ದರೂ ಶರೀರಯಷ್ಟಿ ಉಕ್ಕಿನಂತೆ ಗಟ್ಟಿಯಾದುದು. ಕಣ್ಣುಗಳು ಕಾಂತಿಯುತವಾದುವು; ಅವುಗಳ ನೋಟವು ಅಲಗಿನಂತೆ ತೀಕ್ಷ್ಣವಾದುದು. ಈ ಪರಿಯ ಆತನನ್ನು ನೋಡಿ, ಸಾಕ್ಷಾತ್ ಶೂಲಪಾಣಿ ಶಂಕರನು ಲೋಕೋದ್ಧಾರಕ್ಕಾಗಿ ದಕ್ಷಿಣಾಮೂರ್ತಿಯಾಗಿ ಅಲ್ಲಿ ಅವತರಿಸಿದನೋ, ಎಂದು ಕೆಲ ಭಾವಿಕರಿಗೆ ಭಾಸವಾಯಿತು.

ಬೈರಾಗಿ ಖಾನನನ್ನು ಉದ್ದೇಶಿಸಿ ಮೊನೆಯಾದ ಮಾತುಗಳನ್ನು ಮಿತವಾಗಿ ನುಡಿದನು: –“ ಖಾನಸಾಹೇಬ ! ವೃಥಾಲಾಪಗಳು ವೀರರ ಲಕ್ಷಣವಲ್ಲ. ಇಲಿ ಯಾರು ? ಹುಲಿ ಯಾರು ? ಸಿಂಹ ಯಾರು ? ಗ್ರಾಮ ಸಿಂಹ ಯಾರು ? ಎಂಬುದನ್ನು ನಿರ್ಣಯಿಸುವ ಸಂದರ್ಭವು ಇಷ್ಟು ಸಮೀಪ ದಲ್ಲಿ ಇರುವಾಗ ಜಂಭದ ಆಡಂಬರವೇಕೆ ? ನಿಮ್ಮ ಪೌರುಷದ ಸತ್ಯತೆ ಕೃತಿಯಿಂದ ಸಿದ್ಧವಾಗಲಿ.”

ಬೈರಾಗಿಯ ಈ ಮಾತುಗಳನ್ನು ಕೇಳಿ ಖಾನನು ಚಕಿತನಾದನು. ಸಭಿಕರೆಲ್ಲರು ಅಚ್ಚರಿಗೊಂಡರು.

ಹೊರ ಅಂಗಿಯನ್ನೂ ಟೊಪ್ಪಿಗೆಯನ್ನೂ ಜೋಡನ್ನೂ ತೆಗೆದು ಬಿಸುಟು ಖಾನನೂ ಕಾಳಗಕಣಕ್ಕೆ ಇಳಿದು ಬಂದನು. ಆತನ ಕೈಯಲ್ಲಿ ಅತಿಸ್ಥೂಲ ವಾದ ಕರಾಲಖಡ್ಗವೊಂದು ಒಪ್ಪುತ್ತಿದ್ದಿತು. ಅಷ್ಟರಲ್ಲಿ ಬೈರಾಗಿಯ ಮೇಲಂಗಿ ಮಾಯವಾಗಿ ಒಳಗೆ ಕನಚದಂತಹ ಒಂದು ತೊಡಪು ಕಾಣಿಸತೊಡಗಿತು. ಆತನು ನಿರಾಯುಧನಿರುವಂತೆ ತೋರಿತು.

ಬಾದಶಹನ ಅಪ್ಪಣೆಯ ಮೇರೆಗೆ ಸೇವಕನು ಒಂದು ಕತ್ತಿಯನ್ನು ತಂದು ಬೈರಾಗಿಯ ಕೈಯಲ್ಲಿ ಕೊಟ್ಟನು. ಅದನ್ನು ಆತನು ಪರೀಕ್ಷಿಸುವನೋ ಎನ್ನುವಂತೆ, ನೀಟಾಗಿ ಹಿಡಿದು ಕೊಡಹಿದನು. ಅದು ಹಿಡಿಕೆಯ ಹತ್ತಿರ ಹೋಳಾಗಿ ಕೆಳಗೆ ಬಿದ್ದಿತು. ‘ಇದೇನು ವಿಚಿತ್ರ’ವೆಂದು ಬಾದಶಹನ ಸೇವ ಕನು ಇನ್ನೊಂದು ಕತ್ತಿಯನ್ನು ಕೊಟ್ಟನು. ಬೈರಾಗಿ ಅದನ್ನೂ ಗಟ್ಟಿಯಾಗಿ ಹಿಡಿದು ಝಳಪಿಸಿದನು. ಅದೂ ಮುರಿದುಬಿದ್ದಿತು. ಬಳಿಕ ಇನ್ನೊಂದು; ಆಮೇಲೆ ಮಗದೊಂದು; ಹೀಗೆ ಹನ್ನೆರಡು ಕತ್ತಿಗಳು ಬೈರಾಗಿಯ ಕೈಚಳ ಕಕ್ಕೆ ತುಂಡಾಗಿ ಹೋದವು. ಬಾದಶಹನು ವಿಸ್ಮಿತನಾದನು. ಪ್ರೇಕ್ಷಕರು ಬೆರಳು ಕಚ್ಚಿದರು.

ತನ್ನ ಸ್ವಂತದ ಉಪಯೋಗಕ್ಕಾಗಿ ಕಾಯ್ದಿರಿಸಿದ್ದ ಇನ್ನೂ ಒಂದು ಹೊಸ ಕರಾರಿಯನ್ನು ತಂದುಕೊಡಲು ಬಾದಶಹನು ಸೇವಕನಿಗೆ ವಿಧಿಸುತ್ತಿ ದ್ದನು. ಅಷ್ಟರಲ್ಲಿ ಬೈರಾಗಿ ಗಂಭೀರವಾಣಿಯಿಂದ ಹೇಳಿದನು:

“ ಬೇಡ ಬೇಡ ದಿಲ್ಲೀಶ್ವರರೇ ! ಇನ್ನು ಮೇಲೆ ಈ ಪರಿಯ ಖಡ್ಗದ ಅವಹೇಳನ ಸಾಕು. ಬೇರೆಯವರ ಕತ್ತಿಗಳು ನನ್ನ ಕೈಯಲ್ಲಿ ಬದುಕಿಕೊಳ್ಳಲಾರವು. ನನ್ನ ನಾಗರ ಮುರಿ ನನ್ನ ಬಳಿಯಲ್ಲಿ ಇದೆ.”

ಹೀಗೆ ನುಡಿದ ಬೈರಾಗಿ ತನ್ನ ಕವಚದೊಳಗೆ ಕೈಯಿಕ್ಕಿ ಏನನ್ನೋ ಹೊರಗೆ ತೆಗೆದನು. ಮರುಕ್ಷಣದಲ್ಲಿ ಬಳ್ಳಿಯಂತೆ ಬಳುಕಿ, ಬೆಂಕಿಯಂತೆ ಉರಿದು, ನಾಗರ ಮರಿಯಂತೆ ನಲಿದಾಡುವ, ಘೋರವಾದ, ತೆಳುವಾದ, ಮಾಟವಾದ ಕಠಾರಿಯೊಂದು ಬೈರಾಗಿಯ ಬಲಗೈಯಲ್ಲಿ ಮಿಂಚಿನಂತೆ ಮಿನುಗುತ್ತಿತ್ತು !

ವೀರರಿಬ್ಬರು ದ್ವಂದ್ವಯುದ್ಧಕ್ಕೆ ಅಣಿಯಾಗಿ ಒಬ್ಬೊಬ್ಬರನ್ನೊಬ್ಬರು ತಾಗಿದರು. ಕತ್ತಿಗಳನ್ನು ಕುಣಿಸುತ್ತ ಹಿಂದು, ಮುಂದು, ಎಡಕ್ಕೆ, ಬಲಕ್ಕೆ, ಓರೆಯಾಗಿ, ದುಂಡಾಗಿ, ಹೆಜ್ಜೆಗಳನ್ನು ಇಕ್ಕುತ್ತ, ವೇಗವಾಗಿ ಸುತ್ತಾಡಿದರು. ವಿಚಿತ್ರವಾಗಿ ತಿರುಗುವ ಆನರ ಕತ್ತಿಗಳು ‘ಸೊಂಯ್-ಪೊಂಯ್, ಖಟ್-ಖಣಲ್’ ಎಂಬ ಸಪ್ಪಳಗಳನ್ನು ಮಾಡಿದುವು. ‘ಛಕ್-ಫಕ್’ ಎಂದು ಕಿಡಿಗಳನ್ನು ಕಾರಿದುವು.

ಕಾದಾಟವು ಬಿರುಸಾಯಿತು. ಇರಿಯುವ ರಭಸದಲ್ಲಿ ಯೋಧರು ಮೈಮರೆತರು. ವಿಲಕ್ಷಣವಾದ ವೀರಚೇಷ್ಟೆಗಳನ್ನು ಮಾಡುತ್ತ ಬೊಬ್ಬಿರಿದರು, ಗರ್ಜಿಸಿದರು, ಕೇಕೆಹಾಕಿದರು. ಅಪೂರ್ವವಾದ ಈ ಯುದ್ಧ ಕುತೂಹಲವನ್ನು ನೋಡುತ್ತ ಜನಸ್ತೋಮವು ಚಿತ್ರದಂತೆ ನಿಶ್ಚಲವಾಗಿ ಕುಳಿತುಕೊಂಡಿತು.

ಎಷ್ಟು ಹೊತ್ತಾದರೂ ಒಬ್ಬರೂ ಸೋಲಲಿಲ್ಲ. ಹೋರಾಟವು ಒಂದು ಮಟ್ಟಕ್ಕೆ ಬರಲು ಇಬ್ಬರೂ ಕ್ಷಣಹೊತ್ತು ಸುಮ್ಮನೆ ನಿಂತುಕೊಂಡರು. ಆಗ ಖಾನನು ತನ್ನ ಪ್ರತಿಸ್ಪರ್ಧಿಯನ್ನು ಉದ್ದೇಶಿಸಿ ಪ್ರಶಂಸೆಯ ವಚನಗಳನ್ನು ಆಡಿದನು :

“ ಬೈರಾಗಿ ಮಹಾರಾಜ ! ಕ್ಷಮಿಸಿರಿ. ನಿಮ್ಮ ವಿಷಯವಾಗಿ ನನ್ನಲ್ಲಿದ್ದ ಮೊದಲಿನ ದುರಭಿಪ್ರಾಯವು ಎತ್ತಲೋ ದೂರವಾಗಿದೆ. ನಿಜವಾಗಿ ನೀವು ವೀರರು ! ನಿಮ್ಮ ಸಮರಕೌಶಲವು ವಿಲಕ್ಷಣವಾಗಿದೆ. ಇಂತಹ ಯೋಧನನ್ನು

ನಾನು ಹಿಂದೆ ನೋಡಿರಲಿಲ್ಲ. ನನ್ನ ಇದಿರಾಳಿಯಾಗಿ ಇಷ್ಟು ಕಾಲ ಕಾದಿದವರನ್ನು ಕಾಣೆ. ಹೀಗೆ ನಾವು ಎಷ್ಟು ಸಮಯ ಕಾದಿದರೂ ಈ ಯುದ್ಧದ ನಿರ್ಣಯವಾಗದು. ಅದಕ್ಕಾಗಿ ನಾನೊಂದು ಉಪಾಯವನ್ನು ಸೂಚಿಸುವೆ."

"ಅದೇನು ಹೇಳಿರಿ, ಖಾನ ಸಾಹೇಬ!" ಬೈರಾಗಿ ನಿಶ್ಚಲವಾಗಿ ಕೇಳಿದನು.

"ನಿಮ್ಮ ಇಂತಹ ಒಂದು ಅಂಗವನ್ನು ನನ್ನ ಕತ್ತಿಯಿಂದ ಮುಟ್ಟುವೆನು ಎಂದು ಮೊದಲು ಸಾರಿಹೇಳಿ, ಆಮೇಲೆ ಕಾದುತ್ತ ಕಾದುತ್ತ ಅದನ್ನು ಹಾಗೆ ಮುಟ್ಟಿ ತೋರಿಸುವೆನು. ನೀವಾದರೂ ಹೀಗೆಯೇ ಮಾಡಿರಿ. ಪ್ರತಿ-ಕಕ್ಷಿಯ ಏರಾಟವನ್ನು ತಪ್ಪಿಸಿ ಹೀಗೆ ಮಾಡಲು ಹೆಚ್ಚು ಸಮರ್ಥನಾದವನೇ ಕೊನೆಗೆ ಜಯಶಾಲಿ."

"ಆಗಬಹುದು."

ಈ ನವವಿಧಾನದಿಂದ ಇಬ್ಬರೂ ಕಾದಲನುವಾದರು. ಖಾನನಿಗೆ ತನ್ನ ಹಂಚಿಕೆಯೇ ತನ್ನ ಮೇಲೆ ತಿರುಗುವಂತೆ ಆಯಿತು. ವಿಚಿತ್ರವಾದ ವೈಸೂಟಿಯಿಂದ ಬೈರಾಗಿ ಖಾನನ ಪ್ರತಿಯೊಂದು ಏರಾಟವನ್ನು ನಿಷ್ಫಲಗೊಳಿಸಿದನು. ಖಾನನು ತನ್ನ ಕತ್ತಿಯಿಂದ ಬೈರಾಗಿಯ ಒಂದು ಅಂಗವನ್ನೂ ಸ್ಪರ್ಶಿಸಲು ಶಕ್ತನಾಗಲಿಲ್ಲ.

ಇದೀಗ ಬೈರಾಗಿಯ ಸರದಿ ಬಂದಿತು. ಆತನು 'ಎಡಗೈ, ಬಲಭುಜ, ಬೆನ್ನು' ಮುಂತಾಗಿ ಮೊದಲು ಸಾರಿಹೇಳುತ್ತ, ಬಳಿಕ ಖಾನನ ಆ ಆ ಅಂಗವನ್ನು ತನ್ನ ಕತ್ತಿಯಿಂದ ಮುಟ್ಟಿ ತೋರಿಸಿದನು. ಖಾನನು ಅಪ್ರತಿಭನಾದನು. ಆತನ ಮುಖಚರ್ಯೆ ಇಳಿದು ಹೋಯಿತು. 'ಭಲಾ, ಶಾಹೆಬಾಸ್! ಬಹದ್ದೂರ್! ಜೀತೇ ರಹೋ ಬೈರಾಗಿ!' ಎಂದು ಪ್ರೇಕ್ಷಕವೃಂದದಿಂದ ಪ್ರಶಂಸೋದ್ಗಾರಗಳು ಹೊರಹೊಮ್ಮಿದುವು.

ಎಳೆದು ತಂದ ಆವೇಶದಿಂದ ಖಾನನು ಮತ್ತೆ ಸಂಗ್ರಾಮಕ್ಕೆ ಸಿದ್ಧನಾದನು. "ಪರವಾ ಇಲ್ಲ, ಬೈರಾಗಿ ಮಹಾರಾಜ! ಇಕೋ ಹಿಡಿಯಿರಿ ಈ ಹೊಸ ಕಡಿತ!" ಎನ್ನುತ್ತ ಆತನ ಮೇಲೆ ಏರಿ ಹೋದನು. ಬೈರಾಗಿ ಆತನ

ಏಟನ್ನು ತಪ್ಪಿಸಿ ತಿರುಗಿ ಆತನನ್ನು ತಿವಿಯಲು ನುಗ್ಗಿದನು. ಖಾನನು ಬೈರಾಗಿಯ ಪ್ರಹಾರವನ್ನು ತನ್ನ ಕತ್ತಿಯಿಂದ ತಡೆದು, ಮರಳಿ ಆತನ ಮೇಲೆ ಧುಮುಕಬೇಕು ಎನ್ನುವಷ್ಟರಲ್ಲಿ, ಬೈರಾಗಿಯ ಕೈಯೊಳಗಿನ ಕತ್ತಿ ಮೇಲಕ್ಕೆ ಹೋಗಿ ಕೆಳಕ್ಕೆ ಬಂದಿತು.

ಒಂದು ನೆಗೆತ, ಒಂದು ಮಿಂಚು, ಒಂದು ಸದ್ದು; ಗಂಭೀರವಾದ ಧ್ವನಿ ! " ನಾಗರ ಮರಿ ! ನಾಗರ ಮರಿ !! "

ಎಲ್ಲರ ಕಣ್ಣುಗಳು ಕುಕ್ಕಿದುವು. ಒಂದು ನಿಮಿಷ ಏನಾಯಿತು ಯಾರಿಗೂ ತಿಳಿಯಲಿಲ್ಲ. " ಯಾ ಅಲ್ಲಾ ! " ಎಂಬ ಆಕ್ರೋಶಧ್ವನಿ ಖಾನನ ಮುಖದಿಂದ ಹೊರಬಿದ್ದಿತು. ಮರುಕ್ಷಣದಲ್ಲಿ ಆತನ ರುಂಡವು ಧಡದಿಂದ ಕಳಚಿತು. ಇನ್ನೊಂದು ಕ್ಷಣದಲ್ಲಿ ರಕ್ತಮಯವಾದ ಆತನ ದೇಹವು ಧೊಪ್ಪೆಂದು ನೆಲದ ಮೇಲೆ ಕುಸಿದುಬಿದ್ದಿತು !

ಖಾನನ ಅಧಃಪತನದಿಂದ ಸಭೆಯಲ್ಲಿ ಗಲಭೆ ಉಂಟಾಯಿತು. ತಮ್ಮ ತಮ್ಮ ಸ್ಥಳಗಳನ್ನು ಬಿಟ್ಟು ಬೈರಾಗಿಯನ್ನು ನೋಡಲು ಹೋದವರು ಕೆಲರು. ಖಾನನಿಗಾಗಿ ಸಹಾನುಭೂತಿಯಿಂದ ಮುನ್ನುಗ್ಗಿದವರು ಕೆಲರು. " ಅಪೂರ್ವ ! ವಿಲಕ್ಷಣ ! ಬೈರಾಗಿ ಮಹಾರಾಜಕೀ ಜಯ ! " ಎಂದು ಜಯಘೋಷ ಮಾಡುವವರು ಕೆಲರು. " ಇವನು ಬೈರಾಗಿ ಅಲ್ಲ, ಸೈತಾನ ! ಯಾ ಅಲ್ಲಾ ! ತೋಬಾ ತೋಬಾ ! ಎಂತಹ ಖಾನಸಾಹೇಬ ! ಅಯ್ಯೋ ! " ಎಂದು ಖಾನನಿಗಾಗಿ ಮರಗುವವರು ಕೆಲರು. ನಗರ ರಕ್ಷಕ ದಳದವರು ಈ ಗೊಂದಲವನ್ನು ಶಾಂತಗೊಳಿಸಲು ಮಾಡಿದ ಪ್ರಯತ್ನಗಳು ಬೇಗ ಯಶಸ್ವಿಯಾಗಲಿಲ್ಲ. ಅಷ್ಟರಲ್ಲಿ ಮುಕ್ಕಾಲು ಪಾಲು ಜನಗಳು ಆ ಸ್ಥಳವನ್ನು ಬಿಟ್ಟು ತಮ್ಮ ತಮ್ಮ ಬಿಡಾರಗಳತ್ತ ತೆರಳಿದರು.

ಬಾದಶಹನು ಖಾನನು ಬಿದ್ದ ಸ್ಥಳಕ್ಕೆ ಬಂದನು. ಇಂತಹ ಬಲಶಾಲಿ ಸರದಾರನನ್ನು ಕಳೆದುಕೊಂಡುದಕ್ಕೆ ಶೋಕಪ್ರದರ್ಶನ ಮಾಡಿದನು. ಖಾನನ ಬಂಧುವರ್ಗದವರನ್ನು ಕರೆಯಿಸಿ ಸನ್ಮಾನಪೂರ್ವಕವಾಗಿ ಆತನ ಶವ ಸಂಸ್ಕಾರವು ನಡೆಯುವಂತೆ ವ್ಯವಸ್ಥೆಮಾಡಿದನು.

ಅತ್ತ ಬೈರಾಗಿ ಈ ಗೊಂದಲದಲ್ಲಿ ಎಲ್ಲರ ಕಣ್ಣನ್ನು ತಪ್ಪಿಸಿ ಎಲ್ಲಿಯೋ ಮಾಯವಾಗಿ ಹೋದನು ! ಕೆಲರು ಆತನನ್ನು ಸ್ವಲ್ಪ ದೂರಕ್ಕೆ ಹಿಂಬಾಲಿಸಿದರು. ಮುಂದೆ ಆತನು ಮರೆಯಾದನು. ನಾಗರಿಕರ ನೋಟವನ್ನು ತಪ್ಪಿಸುವುದು ಆತನಿಗೆ ಕೆಲಮಟ್ಟಿಗೆ ಸಾಧ್ಯವಾದರೂ, ಬಾದಶಹನ ಸರ್ವತ್ರ ಸಂಚಾರಿ ಗುಪ್ತಚಾರರ ಸೂಕ್ಷ್ಮದೃಷ್ಟಿಗೆ ಮಂಕುಬೂದಿಯನ್ನು ಹಚ್ಚುವುದು ಮಾತ್ರ ಆತನಿಗೆ ಸಾಧ್ಯವಾಗಲಿಲ್ಲ.

ರಾಜಧಾನಿಯ ಹೊರಗಿನ ಬೇರೊಂದು ದಿಕ್ಕಿನ ಇನ್ನೊಂದು ಶಿವಾಲಯದಲ್ಲಿ ಬಾದಶಹನ ಗುಪ್ತ ಸಂಚಾರಕರು ಬೈರಾಗಿಗಳನ್ನು ಕಂಡುಹಿಡಿದರು. ಯುಕ್ತಿಪ್ರಯುಕ್ತಿಗಳಿಂದ ಆ ಅನುಯಾಯಿಗಳೊಡನೆ ಮಾತುಕತೆಗಳನ್ನು ನಡೆಯಿಸಿ ಸ್ನೇಹವನ್ನು ಸಂಪಾದಿಸಿ ವೀರ ಬೈರಾಗಿಯ ವಿಚಾರವಾಗಿ ಅನೇಕ ಸಂಗತಿಗಳನ್ನು ತಿಳಿದುಕೊಂಡರು. ಬಾದಶಹನ ಸನ್ನಿಧಿಗೆ ಬಂದು ಹೀಗೆ ಅರಿಕೆ ಮಾಡಿದರು:

"ಪ್ರಭುಗಳು ಚಿತ್ತಯಿಸಬೇಕು. ಆ ಬೈರಾಗಿವೀರನು ನೈಜ ಬೈರಾಗಿಯಲ್ಲ. ಆತನು ದಕ್ಷಿಣ ಭಾರತಲ್ಲಿ ಇರುವ ಕೆಳದಿ ಎಂಬ ಸಂಸ್ಥಾನದ ದೊರೆ. ಸದಾಶಿವನಾಯಕನ ಸುಪುತ್ರ; ಆತನ ಹೆಸರು ದೊಡ್ಡ ಸಂಕಣ್ಣ ನಾಯಕ. ಆತನು ಕೆಲಕಾಲ ರಾಜ್ಯಪರಿಪಾಲನ ಮಾಡಿ, ಅನಂತರ ತನ್ನ ತಮ್ಮನಿಗೆ ಆಡಳಿತವನ್ನು ಒಪ್ಪಿಸಿ, ತೀರ್ಥಯಾತ್ರೆ ಮತ್ತು ದೇಶಾಟನ ಮಾಡುವ ಉದ್ದೇಶದಿಂದ ವೇಷಾಂತರ ಮಾಡಿಕೊಂಡು, ತನ್ನ ಕೆಲ ಸೇವಕರೊಡನೆ ಇಲ್ಲಿಗೆ ಬಂದಿದ್ದಾನೆ. ಆತನು ಕಟ್ಟಾ ಶಿವಭಕ್ತ."

ಈ ವೃತ್ತಾಂತವನ್ನು ಕೇಳಿ ಬಾದಶಹನಿಗೆ ಸಂತೋಷವಾಯಿತು. ಕೆಳದಿ ಸಂಸ್ಥಾನದ ವರ್ತಮಾನವನ್ನು ಈ ಪೂರ್ವದಲ್ಲಿ ಆತನು ಕೇಳಿದ್ದನು. ತನ್ನ ಸೇನಾಧಿಕಾರಿಯನ್ನೂ ಹಲವಾರು ಸೈನಿಕರನ್ನೂ ಕಳುಹಿ, ಸಂಕಣ್ಣ ನಾಯಕನನ್ನು ವಾದ್ಯ ವೈಭವದೊಂದಿಗೆ ಪಲ್ಲಕ್ಕಿಯಲ್ಲಿ ಕೂರಿಸಿ ಸತ್ಕಾರಪೂರ್ವಕವಾಗಿ ಕರೆದುಕೊಂಡು ಬರಲು ಆಜ್ಞಾಪಿಸಿದನು. ನಾಯಕನು ಬಂದ ಬಳಿಕ ಆತನನ್ನು ಉಚಿತ ರೀತಿಯಲ್ಲಿ ಆದರಿಸಿದನು. ಅನಂತರ

ದಿಲ್ಲೀಶ್ವರ ಮತ್ತು ಸಂಕಣ್ಣನಾಯಕರ ನಡುವೆ ಸುಖ ಸಲ್ಲಾಪಗಳು ನಡೆದುವು:

" ಸಂಕಣ್ಣನಾಯಕರೇ, ನನ್ನ ಸಂದೇಹವು ಸುಳ್ಳಾಗಲಿಲ್ಲ. ಕೊನೆಗೆ ತಮ್ಮ ಕ್ಷಾತ್ರವೃತ್ತಿಯ ರಾಜಸ್ವರೂಪವು ಪ್ರಕಟವಾಯಿತು. ತಾವೂ ನನ್ನಂತೆ ನರಪತಿಗಳು; ಅಗ್ರಮಾನಕ್ಕೆ ಅರ್ಹರು. ಹೀಗಿದ್ದು ಕಪಟವೇಷ ದಿಂದ ಜನರನ್ನು ಮೋಸಗೊಳಿಸುವುದು ಯುಕ್ತವೇ ?"

" ಹಾಗಲ್ಲ ದಿಲ್ಲೀಶ್ವರರೇ ! ಇದರಲ್ಲಿ ಮೋಸ ಯಾವುದು ? ಜನಗಳ ಜಂಜಡ ಬೇಡ; ನಮ್ಮ ಪಾಡಿಗೆ ನಾವು ಇದ್ದುಕೊಂಡು ಶಿವಯೋಗವನ್ನು ಆಚರಿಸುವುದಕ್ಕಾಗಿ ಈ ಉಡುಪನ್ನು ಧರಿಸಿದರೆ ಅನ್ಯರಿಗೆ ಆಗುವ ಹಾನಿ ಯೇನು ? "

" ಸಂಕಣ್ಣನಾಯಕರೆ ! ಇದೀಗ ತಾವು ನನ್ನ ಮೇಲೆ ಬಹು ದೊಡ್ಡ ಉಪಕಾರವನ್ನು ಮಾಡಿದ್ದೀರಿ. ಏಕಾಂಗವೀರರಾದ ತಾವು ಉನ್ಮತ್ತಸಾದ ನಮ್ಮ ಖಾನನ ಕಂಟಕವನ್ನು ದೂರ ಮಾಡಿದಿರಿ. ತಮ್ಮ ಖಡ್ಗನೈಪುಣ್ಯವು ಅನಾದೃಶವಾದುದು. ತಮ್ಮ 'ನಾಗರ ಮರಿ'ಯಂತಹ ಕತ್ತಿಯನ್ನು ನಾವು ಕಂಡುದಿಲ್ಲ. ನೋಡಲು ಎಷ್ಟು ಕೋಮಲವೋ, ಅಷ್ಟು ಘೋರ ವಾದುದು ಅದರ ಶಕ್ತಿ ! ಈ ತಮ್ಮ ಉಪಕಾರದ ಸ್ಮರಣೆಗಾಗಿ ತಾವು ನನ್ನಿಂದ ಏನನ್ನಾದರೂ ಸ್ವೀಕರಿಸಲೇಬೇಕು. "

" ದಿಲ್ಲೀಶ್ವರಾ ! ಆ 'ನಾಗರ ಮರಿ' ಯ ರಹಸ್ಯವು ಅದ್ಭುತವಾಗಿದೆ. ಅದನ್ನು ತಿಳಿದವರು ಇಲ್ಲ. ನಮ್ಮ ಕುಲದೇವತೆಯ ವರದಿಂದ ಅದು ನಮಗೆ ಪ್ರಾಪ್ತವಾದುದು. ದುಷ್ಟನಿಗ್ರಹವು ನಾವು ಯಾವಾಗಲೂ ಮಾಡ ಬೇಕಾದ ಕರ್ತವ್ಯವೇ. ಇದರಿಂದ ಉಪಕಾರ ಯಾತರದು ? ಪರಶಿವನು ನನ್ನನ್ನು ಯಾವ ಕೊರತೆಯಲ್ಲಿಯೂ ಇರಿಸಿಲ್ಲ. "

" ಹಾಗಲ್ಲ, ನಾಯಕರೇ ! ತಮ್ಮ ಉಪಕಾರದ ಕುರುಹು ಈ ನನ್ನ ರಾಜ್ಯದಲ್ಲಿ ಒಂದಾದರೂ ಇರಲಿ ಎಂಬುದೇ ನನ್ನ ಅಪೇಕ್ಷೆ. "

" ಹಾಗಾದರೆ ಹೀಗೆ ಮಾಡಬಹುದು, ದಿಲ್ಲೀಪತೇ ! ಶಿವಜಂಗಮರನ್ನು ಳಿದು ನನಗೆ ಪ್ರಿಯವಾದುದು ಇನ್ನೊಂದು ಇಲ್ಲ. ನಿಮ್ಮ ರಾಜ್ಯದಲ್ಲಿ ಅನೇಕ ಶೈವ ಕ್ಷೇತ್ರಗಳು ಇವೆ. ಅವುಗಳ ದರ್ಶನಕ್ಕಾಗಿ ನಮ್ಮ ದಕ್ಷಿಣ ದೇಶದಿಂದ ಅನೇಕ ಯಾತ್ರಿಕರು ಬರುವರು. ಇಂತಹರಿಗಾಗಿ ತಕ್ಕ ಸೌಕರ್ಯಗಳನ್ನು ಕಲ್ಪಿಸಿಕೊಡಿ. ತೀರ್ಥಯಾತ್ರಾಸ್ಥಳಗಳಲ್ಲಿ ಮಠಗಳನ್ನೂ ಧರ್ಮಶಾಲೆಗಳನ್ನೂ ಕಟ್ಟಿಸಿಕೊಡಿ. ಅವು ಚಿರಕಾಲ ನಡೆಯುವಂತೆ ವೃತ್ತಿಗಳನ್ನು ಹಾಕಿಕೊಡಿ. "

" ಆಗಬಹುದು, ನಾಯಕರೆ ! ಕೂಡಲೆ ಹಾಗೆ ಅಪ್ಪಣೆಯನ್ನು ಹೊರಡಿಸುವೆ. "

" ದಿಲ್ಲೀಶ್ವರಾ ! ಇದಕ್ಕಾಗಿ ಶಿವಭಕ್ತರೆಲ್ಲರು ತಮಗೆ ಕೃತಜ್ಞರಾಗುವರು. ಇದಲ್ಲದೆ, ಇನ್ನೂ ಒಂದು ವಿಶಿಷ್ಟ ವಿಷಯವು ಇದೆ. ತಮ್ಮ ರಾಜ್ಯದಲ್ಲಿರುವ ಶ್ರೀ ಕಾಶೀಕ್ಷೇತ್ರವು ನಮಗೆ ಪರಮ ಪವಿತ್ರವಾದುದು. ಅಲ್ಲಿಯೂ ಒಂದು ಭದ್ರವಾದ ಮಠವನ್ನು ಕಟ್ಟಿಸಿ ಶಿವಜಂಗಮರಿಗೆ ಪುರಸ್ಕಾರ ದೊರೆಯುವಂತೆ ವ್ಯವಸ್ಥೆ ಮಾಡುವುದಾಗಿ ಬೇಡುವೆ. "

" ಅನುಮಾನವೇಕೆ ಸಂಕಣ್ಣನಾಯಕರೆ ! ಈ ವಿಚಾರದಲ್ಲಿ ಮೊದಲು ಲಕ್ಷ್ಯಕೊಡುವಂತೆ ನನ್ನ ಅಧಿಕಾರಿಗಳಿಗೆ ಆಜ್ಞಾಪತ್ರವನ್ನು ಹೊರಡಿಸುವೆ. ಇದಲ್ಲದೆ ಇನ್ನೂ ಒಂದು ಸಂಗತಿ ನನ್ನ ಮನಸ್ಸಿನಲ್ಲಿ ನಟ್ಟಿದೆ. ತಮ್ಮೀ ದ್ವಂದ್ವ ಯುದ್ಧ ಘಟನೆಯ ಸ್ಮಾರಕವಾಗಿ ಈ ರಾಜಧಾನಿಯಲ್ಲಿಯೂ ಒಂದು ಮಠವನ್ನು ಕಟ್ಟಿಸಿ ಕೊಡುವುದಾಗಿ ನಿರ್ಧರಿಸಿದ್ದೇನೆ. 'ಚಾವಲಕೀ ಮಂಡಿ' ಎಂದರೆ 'ಅಕ್ಕಿಯ ಪೇಟೆ' ಎಂಬ ಭಾಗದಲ್ಲಿ ಒಂದು ಸ್ಥಳವಿದೆ. ಅದನ್ನು ಶಿವಜಂಗಮ ಧರ್ಮಕ್ಕಾಗಿ ಶಿವಾರ್ಪಣ ಮಾಡುವೆ. "

" ನಿಮ್ಮೀ ಔದಾರ್ಯಕ್ಕಾಗಿ ನಾವು ಕೃತಜ್ಞತೆಯನ್ನು ಸಲ್ಲಿಸುತ್ತೇವೆ. ದಿಲ್ಲೀಶ್ವರಾ ! ಇನ್ನು ಹೋಗಿಬರುವೆವು, ಅಪ್ಪಣೆ ಕೊಡಿ. "

ಎಂದು ಹೇಳಿ ಸಂಕಣ್ಣನಾಯಕನು ಅಲ್ಲಿಂದ ಹೊರಟನು. ಬಾದಶಹನ ಬಲವಾದ ಬಿನ್ನಹವನ್ನು ಮನ್ನಿಸಿ ಮುಂದೆ ಒಂದೆರಡು ದಿನ ಆ ದಿಲ್ಲಿ

ರಾಜಧಾನಿಯಲ್ಲಿ ತಂಗಿದನು. ಬಾದಶಹನು ಕೆಳದಿ ರಾಜ್ಯದ ಗೌರವಕ್ಕಾಗಿ, ನಾಯಕನು ಬೇಡವೆಂದರೂ, ಹಸಿರು ನಿಶಾನಿಯ ಮರ್ಯಾದೆಯನ್ನೂ ಅಮೂಲ್ಯ ಅನರ್ಘ್ಯ ರತ್ನಾಭರಣಗಳ ಕಾಣಿಕೆಯನ್ನೂ ಸನ್ಮಾನಪೂರ್ವಕ ವಾಗಿ ಆತನಿಗೆ ಸಮರ್ಪಿಸಿದನು.

---

ಕತೆ ನಾಲ್ಕು

# ಗಂಡುಭೂಮಿ



ಚಿತ್ರದುರ್ಗದ ಮದಕರಿನಾಯಕನು ಬಹಳ ಶೂರನು. ಈ ಕಾರಣದಿಂದ ಹೈದರ ಅಲಿ ಆತನನ್ನು ದ್ವೇಷಿಸುತ್ತಿದ್ದನು. ಮದಕರಿನಾಯಕನು ಪೇಶವೆಯವರೊಡನೆ ಸಂಧಾನ ಬೆಳಿಸಿ ಒಂದು ಸಂಗ್ರಾಮದಲ್ಲಿ ಹೈದರ ಅಲಿಯನ್ನು ಪುಡಿಪುಡಿ ಮಾಡಿದನು. ಭೀಮಸೇನನ ವರದಿಂದ ಗಂಡುಭೂಮಿಯೆನಿಸಿದ ಚಿತ್ರದುರ್ಗದ ಗಂಡುಗಲಿತನವು ಹೈದರ ಅಲಿಯ ಅನುಭವಕ್ಕೆ ಬಂದಿತು. ಅದು ಹೇಗೆ ಎಂಬುದನ್ನು ಇಲ್ಲಿ ನಿರೂಪಿಸಿದೆ. ಈ ಕಥೆಯ ಕಾಲ ಹದಿನೆಂಟನೆಯ ಶತಮಾನದ ಉತ್ತರ ಭಾಗ

[ ೧ ]

“ ಶ್ರೀಮಾನ್ ಮಹಾನಾಯಕ್ಷಾಚಾರ್ಯ ನಾಯಕಶಿರೋಮಣಿ ಕಾಮಗೇತಿ ವಂಶೀಯ ಮದಕರಿನಾಯಕ, ಸಂಸ್ಥಾನ ಚಿತ್ರದುರ್ಗ ಇವರ ಸನ್ನಿಧಿಯಲ್ಲಿ.

“ ಶ್ರೀಮಂತ ಪಂತಪ್ರಧಾನ ನಾನಾಸಾಹೇಬ ಪೇಶವೆ, ಪುಣೇಕರ, ಹಾಲಿ ಮುಕಾಮ್ ನುಗ್ಗೇಹಳ್ಳಿ, ಇವರು ಮಾಡುವ ಅನೇಕ ಸಾದರ ಪ್ರಣಾಮಗಳು. ಉಭಯಕುಶಲೋಪರಿ. ಪ್ರಸ್ತುತ ನಾವೀ ರಾಯಸವನ್ನು ಬರೆಯಿಸಿದ ಕಾರಣವೇನಂದರೆ.

“ ಈಗ ಕೆಲದಿನಗಳಿಂದ ನಾವು ದಕ್ಷಿಣಭಾಗದ ದಂಡಯಾತ್ರೆಗೆ ಹೊರಟಿರುವ ಸಮಾಚಾರವು ತಮಗೆ ವಿದಿತವಾಗಿರಲಿಕ್ಕೆ ಸಾಕು. ಈ ಯಾತ್ರಾಕ್ರಮದಲ್ಲಿ ತಮ್ಮ ರಾಜನೀತಿ ಚಾತುರ್ಯದ ಮತ್ತು ಶೌರ್ಯ ಸಾಹಸಗಳ ವೃತ್ತಾಂತಗಳು ಹೆಚ್ಚು ಸಮೀಪದಿಂದ ಕೇಳಲಿಕ್ಕೆ ದೊರೆತು ನಮ್ಮ ಕರ್ಣಪಟಲದ ಮೇಲೆ ಮೂಡಿ ನಿಂತಿರುತ್ತವೆ.

“ ತಮ್ಮ ಶೌರ್ಯಸಾಹಸದ ಲಾಭವನ್ನು ಮೈಸೂರಿನ ನವಾಬ ಹೈದರ ಅಲಿ ಹಲವು ಬಾರಿ ಪಡೆದುಕೊಂಡಿದ್ದಾನೆ. ನವಾಬ ಹೈದರ ಅಲಿ ಒಂದು ವರ್ಷದ ವರೆಗೆ ನಿಜಗಲ್ ಕೋಟೆಯನ್ನು ವಶಪಡಿಸಿಕೊಳ್ಳಲು ಹೆಣಗಾಡಿ ದಮ್ಮಯ್ಯ ಎಂದು ಕೈಯೂರಿದನು. ಆಗ ತಾವು ಆತನಿಗೆ ಸಹಾಯವನ್ನು ಒದಗಿಸಿ ಆ ಕೋಟೆಯನ್ನು ದೊರಕಿಸಿ ಕೊಟ್ಟಿರಿ. ಇಂತಹ ಸಂದರ್ಭಗಳು ಒಂದಲ್ಲ, ಎರಡಲ್ಲ, ಹಲವು.

“ ಆದರೆ ನಾಯಕರೇ ! ಈ ವಿಧದ ತಮ್ಮ ಉಪಕಾರಗಳನ್ನು ನವಾಬ ಹೈದರ ಅಲಿ ಯಾವ ಬಗೆಯಿಂದ ತೀರಿಸಿರುವನು ಎಂಬ ಸಂಗತಿಯನ್ನು ತಮಗೆ ಒರೆದು ಹೇಳಬೇಕಾಗಿಲ್ಲ. ‘ ಸಂಕಟ ಬಂದಾಗ ವೆಂಕಟರಮಣ ’ ಎನ್ನುವಂತೆ ಆತನು ತನಗೆ ವಿಪತ್ತು ಬಂದಾಗ ತಮ್ಮ ಕೈಕಾಲನ್ನು ಕಟ್ಟಿಕೊಂಡಿರುವನು. ವಿಪತ್ತು ಪರಿಹಾರವಾದ ಕೂಡಲೆ ‘ಗುರ್’ ಎಂದು ತಮ್ಮ ಮೇಲೆ ಕತ್ತಿಯನ್ನು ಮಸಿಯಲಿಕ್ಕೆ ಹಿಂದೆಮುಂದೆ ನೋಡಿರುವುದಿಲ್ಲ.

ನವಾಬ ಹೈದರ ಅಲಿ ಬಲು ತಂತ್ರಗಾರನು. ಆತನ ನೆರೆಯಲ್ಲಿದ್ದ ತಮಗೆ ಈ ವಿಷಯವು ತುಂಬ ಅನುಭವಕ್ಕೆ ಬಂದಿರಲು ಸಾಕು.

"ನವಾಬ ಹೈದರ ಅಲಿಗೂ ನಮಗೂ ಯಾವ ರೀತಿಯ ಸಂಬಂಧ ವಿದೆ ಎಂಬ ವಿಚಾರದಲ್ಲಿ ಹೆಚ್ಚಿಗೆ ಬರೆಯುವ ಅಗತ್ಯವಿಲ್ಲ. ಆ ಮಾಯಾವಿ ನಮ್ಮ ಹಿತಶತ್ರು. ಹಿಂದೆ ನಾವು ಶ್ರೀರಂಗಪಟ್ಟಣದ ಮೇಲೆ ದಾಳಿ ಮಾಡಿದಾಗ ಆತನ ಮೂಲಕ ನಮಗೆ ಪರಾಭವವು ಉಂಟಾಯಿತು. ಈ ಸೋಲಿನ ಸೇಡನ್ನು ತೀರಿಸಿಕೊಳ್ಳುವುದೇ ಈ ನಮ್ಮ ದಂಡಯಾತ್ರೆಯ ಮುಖ್ಯ ಉದ್ದೇಶವಾಗಿದೆ. ನವಾಬ ಹೈದರ ಆಲಿಯ ರಾಜ್ಯದ ಮೇಲೆ ಸಾಂಪ್ರತ ನಾವು ಕೈಕೊಳ್ಳಲಿರುವ ಏರಾಟದಲ್ಲಿ ತಮ್ಮ ದಂಡಿನ ಸಹಾಯವನ್ನು ಅಪೇಕ್ಷಿಸುತ್ತೇವೆ. ತಾವು ಈ ಸಹಾಯವನ್ನು ಮಾಡಿದರೆ ನಮ್ಮ ಕಾರ್ಯವು ಸುಲಭವಾಗಿ ಸಿದ್ಧಿಸುವುದು. ತಮ್ಮ ದಂಡಿನ ಎಲ್ಲ ವೆಚ್ಚವನ್ನು ನಾವು ನೋಡಿಕೊಳ್ಳುತ್ತೇವೆ. ಅನುಮಾನವು ಬೇಡ.

"ನಮ್ಮೀ ಅಭಿಲಾಷೆಯನ್ನು ತಾವು ಅನುಕೂಲವಾಗಿ ನಡೆಸಿಕೊಡುತ್ತೀರೆಂದು ನೆರೆ ನಂಬಿರುವೆ. ಇಂತೀ ವಿಜ್ಞಾಪನೆಗಳು.

ತಮ್ಮ ಸ್ನೇಹಾಕಾಂಕ್ಷಿ
— **ಮಾಧವರಾವ್**"

**ಈ ಓಲೆ ಪುಣೆಯ ಪೇಶವಾ ಮಾಧವರಾಯನಿಂದ ಬಂದುದು. ಚಿತ್ರದುರ್ಗ ಪಾಳೆಯ ರಾಜ್ಯದ ಅಧಿಪತಿಯಾದ ಇಮ್ಮಡಿ ಮದಕರಿನಾಯಕನು ಇದನ್ನು ಓದಿಸುತ್ತಿದ್ದನು. ಚಿತ್ರದುರ್ಗ ಅರಮನೆಯ ಮಂತ್ರಾಲೋಚನಾ ಮಂದಿರದಲ್ಲಿ ನಾಯಕನೂ ಆತನ ಅಂತರಂಗದ ಕೆಲಸಗಾರರೂ ಸೇರಿದ್ದರು. ರಾಯಸದ ರಂಗಣ್ಣನು ಓಲೆಯನ್ನು ಓದುತ್ತಿದ್ದನು. ಮದಕರಿನಾಯಕ, ದಳವಾಯಿ ಭೀಮಣ್ಣ ಮತ್ತು ಕೆಂದನಕೋವಿ ಬರಮಣ್ಣ, ಇವರು ಅದನ್ನು ಕಿವಿಗೊಟ್ಟು ಕೇಳುತ್ತಿದ್ದರು.**

**ಓದುವುದು ಮುಗಿದ ಬಳಿಕ ಮದಕರಿನಾಯಕನು ನಸುಹೊತ್ತು ಆಳವಾದ ವಿಚಾರದಲ್ಲಿ ಮಗ್ನನಾದಂತೆ ತೋರಿತು. ಪೂರ್ವಸ್ಮೃತಿಯ**

ಚಿತ್ರಗಳು ಆತನ ಮಾನಸಿಕ ತೆರೆಯ ಮೇಲೆ ಸುಳಿದು ಹೋಗುತ್ತಿದ್ದಂತೆ ಭಾಸವಾಯಿತು. ಸಂದೇಹ, ಕ್ರೋಧ ಮತ್ತು ಸಂತೋಷ, ಈ ಭಾವನೆಯ ಛಾಯೆಗಳು ಆತನ ಮುಖಮುದ್ರೆಯ ಮೇಲೆ ಒಂದೊಂದು ಕ್ಷಣ ಕಾಣಿಸಿಕೊಂಡು ಮರೆಯಾದುವು. ಕೊನೆಗೆ ನಿರ್ಧಾರದ ಗಂಭೀರತೆಯೊಂದು ತಾನೇ ತಾನಾಗಿ ನಿಂತುಕೊಂಡಿತು. ಮೌನದ ಬೀಗವನ್ನು ಮುರಿದು ಮಾತಿನ ಕದವನ್ನು ನಾಯಕನೇ ತೆರೆದನು:

"ಅಂತೂ ಮರಾಟರು ನಮ್ಮ ಮೈತ್ರಿಯನ್ನು ಅಪೇಕ್ಷಿಸುತ್ತಾರೆ. ಇತ್ತ ನವಾಬ ಹೈದರ ಅಲಿ, ಅತ್ತ ಮರಾಟರು; ಇವರಲ್ಲಿ ನಮ್ಮ ಹಿತದವರು ಯಾರು ಎಂಬುದನ್ನು ಯೋಚಿಸಬೇಕಾಗಿದೆ. ಚಿತ್ರದುರ್ಗದ ಜೀವನದಲ್ಲಿ ಇದೀಗ ಆಯಕಟ್ಟಿನ ಸಂದರ್ಭವು. ಇಂದಿನ ನಮ್ಮ ನಿರ್ಣಯದ ಮೇಲೆ ದುರ್ಗದ ಮುಂದಿನ ಭವಿತವ್ಯವು ಅವಲಂಬಿಸಿದೆ. ಈ ಬಿಕ್ಕಟ್ಟಿನಲ್ಲಿ ಶ್ರೀರಂಗನಾಥನೇ ನಮಗೆ ಸರಿಯಾದ ದಾರಿಯನ್ನು ತೋರಿಸಬೇಕು.

"ಪುಣೆಯ ಪೇಶವೆಯವರು ಈ ಓಲೆಯಲ್ಲಿ ಸೂಚಿಸಿದ ಮಾತುಗಳು ಮನನೀಯವಾಗಿವೆ. ನವಾಬ ಹೈದರ ಅಲಿ ಬಲವಂತನು, ತಂತ್ರಕುಶಲನು; ಮೇಲಾಗಿ ನಮ್ಮ ನೆರೆಯಲ್ಲಿ ಇರುವನು. ಆತನ ಹಗೆತನವನ್ನು ಕಟ್ಟಿಕೊಳ್ಳಬಾರದೆಂದು ನಾವು ಇದುವರೆಗೆ ಬಹು ಜಾಗರೂಕತೆಯಿಂದ ನಡೆದುಕೊಂಡಿದ್ದೇವೆ. ಸಾಮನೀತಿಯನ್ನು ಅನುಸರಿಸಿದ್ದೇವೆ ಒಂದಲ್ಲ, ಹಲವು ಬಾರಿ ಸಹಾಯವನ್ನು ನೀಡಿ ಸ್ನೇಹವನ್ನು ಕೋರಿದ್ದೇವೆ. ಇದಕ್ಕಾಗಿ ಆತನು ನಮ್ಮೊಂದಿಗೆ ಸಖ್ಯದಿಂದ ವರ್ತಿಸಬೇಕಾಗಿದ್ದಿತು. ಅದಕ್ಕೆ ಪ್ರತಿಯಾಗಿ ಆತನಲ್ಲಿ ನಮ್ಮ ವಿಚಾರದಲ್ಲಿ ವಿರೋಧಭಾವನೆಯೇ ಬೆಳೆಯುತ್ತಿರುವಂತೆ ಕಂಡುಬಂದಿದೆ."

ಮದಕರಿ ನಾಯಕನು ಮತ್ತೆ ಯೋಚನಾಪರನಾದನು. ಈ ಸಂಧಿಯನ್ನು ಸಾಧಿಸಿ ನಾಯಕನ ವಿಚಾರಧಾರೆಯನ್ನು ಮುಂದುವರಿಸುವಂತೆ ಕಂದನಕೋವಿ ಬರಮಣ್ಣನು ನುಡಿದನು: "ಬಂಕಾಪುರ ಕೋಟೆಗೆ ಮುತ್ತಿಗೆ ಹಾಕಿ ನವಾಬ ಹೈದರ ಅಲಿ ಪೇಚಾಡುತ್ತಿದ್ದನು. ಆಗ ನಾವು ಆತನ ಸಹಾಯಕ್ಕೆ ಹೋಗಿ ಆ ದುರ್ಗವನ್ನು ಗೆದ್ದುಕೊಟ್ಟೆವು. ಶ್ರೀರಂಗಪಟ್ಟಣದ

ಮೇಲೆ ಮರಾಟರು ದಾಳಿ ಮಾಡಿದರು. ಆಗ ನವಾಬನು ಕಂಗೆಟ್ಟು ಹೋದನು. ನಮ್ಮ ದಂಡಿನವರ ನೆರವು ಆತನಿಗೆ ದೊರೆಯದೆ ಇದ್ದರೆ ಆ ಪಟ್ಟಣವು ಆತನ ಕೈಬಿಟ್ಟುಹೋಗುತ್ತಿತ್ತು. ನಮ್ಮ ಕಟ್ಟಾಳುಗಳ ಸಾಹಸದಿಂದಲೆ ನವಾಬನು ನಿಜಗಲ್ ಕೋಟೆಯನ್ನು ಪಡೆಯಲು ಸಮರ್ಥನಾದನು. ಈ ಸಾಹಸದ ಸಮಾಚಾರವನ್ನು ದಳವಾಯಿ ಭೀಮಣ್ಣನ ಬಾಯಿಯಿಂದಲೇ ಕೇಳಬೇಕು.”

ಈ ಸೂಚನೆಯಿಂದ ದಳವಾಯಿ ಭೀಮಣ್ಣನು ಉತ್ಸಾಹಿತನಾದನು. ಆತನು ತನ್ನ ಕಲ್ಲಿಮೀಸೆಯನ್ನು ತೀಡುತ್ತ ಬೀಗಿದ ಬೆನ್ನನ್ನು ಇನ್ನಿಷ್ಟು ಬೀಗಿಸಿ ವರ್ಣನೆಯನ್ನು ಆರಂಭಿಸಿದನು:

“ಅದೇನು ಹೇಳಲಿ, ಬರಮಣ್ಣ ! ನವಾಬನು ಅದನ್ನು ಮುತ್ತಿ ಒಂದು ವರ್ಷವಾಗಿತ್ತು. ಆದರೂ ನಿಜಗಲ್ ಕೋಟೆ ನಿಜಕಲ್ಲಾಗಿ ನಿಂತಿತ್ತು. ಅದರ ಒಂದು ಕಲ್ಲನ್ನು ಸಡಲಿಸುವುದು ನವಾಬನಿಗೆ ಸಾಧ್ಯವಾಗಿರಲಿಲ್ಲ. ಕೋಟೆಯ ಮೇಲಿನವರ ಪ್ರತಾಪ ಸಾಮಾನ್ಯವಾಗಿರಲಿಲ್ಲ. ಅವರು ಮುತ್ತಿಗೆ ಹಾಕಿದ ಹೈದರ ಅಲಿಯ ದಂಡಿನವರ ಮೇಲೆ ಕಾಯಿಸಿದ ಎಣ್ಣೆಯನ್ನು ಹೊಯ್ಯುವರು, ಕುದಿಯುವ ಅಂಬಲಿಯನ್ನು ಸುರಿಯುವರು. ಇದರಿಂದ ನವಾಬನ ಸೈನಿಕರು ಗಾಸಿಯಾಗುತ್ತಿದ್ದರು. ಈ ಉಪಟಳದಿಂದ ಬೇಸತ್ತು ಸೋಲಿಗೆ ಮೈಯೊಡ್ಡಿದ ನವಾಬನು ನಮ್ಮ ಸಹಾಯವನ್ನು ಕೇಳಿದನು.

“ಆಗ ಮುಖಕ್ಕೆ ಕಾವಿಬಣ್ಣ ಹೂಸಿ ಮೇಲೆ ಬಟ್ಟೆನ ನಾಮ ಮತ್ತು ಚಿಕ್ಕಿಯನ್ನಿಟ್ಟು, ಮೂರು ದಿನಗಳ ಬುತ್ತಿರೊಟ್ಟಿಯನ್ನು ನಾಕ್‌ಚಾಪ್ ಚೀಲ ದಲ್ಲಿ ಬೆನ್ನಿಗೆ ಕಟ್ಟಿ, ಕತ್ತಿಬರಚಿಗಳ ಜೊತೆಗೆ ಮುಳ್ಳು ಪೊದೆಯನ್ನೂ ಕೈಯಲ್ಲಿ ಹಿಡಿದುಕೊಂಡು ಕಾಳಗಕ್ಕೆ ಅಣಿಯಾದ ನಮ್ಮ ಬೀರಬಂಟರನ್ನು ಕಂಡು ಹೈದರ ಅಲಿಯ ಶಿಸ್ತಿನ ಸಿಪಾಯಿಗಳು ಕೂಡ ಬಾಯಿಯಲ್ಲಿ ಬೆರಳು ಕಚ್ಚಿ ದರು. ತಾಯಿಯ ಹೊಟ್ಟೆಯಲ್ಲಿ ಮೂಡಿದಾಗಿನಿಂದ ಧರ್ಮ-ಸರ್ಕಾರದ ಸಂಬಳದಲ್ಲಿ ಹಾಲು ಬೆಣ್ಣೆ ಬೋನವನ್ನು ಸವಿದು ಹರೆಯಕ್ಕೆ ಬಂದ ಲೆಂಕ ರನ್ನು ನಮ್ಮ ದಂಡಿನವರು ಸೊಂಟಕ್ಕೆ ಸರಪಣಿ ಹಚ್ಚಿ ಹಿಡಿದು ತರುವುದನ್ನು ನೋಡಿ ಇದಿರು ಪಕ್ಷದವರು ಇದೇನೆಂದು ಕೇಳಿದರು. ಅಗ ನಮ್ಮವರು

' ಇವರೊ ! ನರಭಕ್ಷಕ ಕಿರಾತರು. ಇವರನ್ನು ಬಿಟ್ಟರೆ ನಿಮ್ಮನ್ನು ಇಡಿಯಾಗಿ ನುಂಗಿ ನೀರು ಕುಡಿಯುವರು ! ' ಎಂದು ಹೇಳಲು ಅವರು ಗಾಬರಿಯಾದರು.

" ಆ ಮೇಲೆ ನಮ್ಮ ದಂಡಿನವರು ತಾವು ತಂದಿದ್ದ ಮುಳ್ಳು ಪೊದೆಗಳಿಗೆ ಅಲ್ಲಲ್ಲಿ ಬೆಂಕಿ ಹತ್ತಿಸಿದರು. ಇವರು ಅಡಿಗೆ ಮಾಡಿಕೊಳ್ಳುತ್ತಿರುವರು ಎಂದು ಭ್ರಮಿಸಿ ಕೋಟೆಯ ಒಳಗಿನವರು ನಿಶ್ಚಿಂತೆಯಿಂದ ಮಲಗಿಕೊಂಡರು. ಆಗ ನಾವು ಕೋಟೆಯ ಮೇಲೆ ಏರಾಟ ಮಾಡಿದೆವು. ಲಗ್ಗೆಯೇರಿ ಒಳಗೆ ನುಗ್ಗಿ ಅಗಸಬಾಗಿಲ ತೆರೆದೆವು. ಅನಂತರ ನಮ್ಮ ದಂಡಿನವರು ಮಾಡಿದ ಕಗ್ಗೊಲೆಯೆಂಬುದು ಅಷ್ಟಿಷ್ಟಲ್ಲ. 'ತಲೆ ಒಂದಕ್ಕೆ ಒಂದು ವರಾಹದ ಮೆಚ್ಚು' ಎಂದು ದೊರೆಗಳ ಅಪ್ಪಣೆಯಾಯಿತು. ಆಗ ಹಲವರು ಹಣದ ಆಸೆಯಿಂದ ಎರಡು ಕೈಯಲ್ಲಿ ಸಾಲದೆ ಬಾಯಲ್ಲಿಯೂ ತಲೆಬುರುಡೆಗಳನ್ನು ಕಚ್ಚಿಕೊಂಡು ತಂದರು. ರುಂಡಗಳ ರಾಶಿಯಾಯಿತು. ದುರ್ಗದವರ ಈ ಸಾಹಸವನ್ನು ನೋಡಿ ನವಾಬ ಹೈದರ ಅಲಿ ಬೆಪ್ಪಾದನು. ಇಂತು ನಿಜಗಲ್ ಕೋಟೆ ಆತನ ಕೈವಶವಾಯಿತು.

" ಇದರ ಪ್ರತಿಫಲವನ್ನು ನಾವು ಇದೀಗ ಅನುಭವಿಸುತ್ತಿದ್ದೇವೆ. ಅದೇನೆಂದರೆ ನವಾಬ ಹೈದರ ಅಲಿಯ ವಕ್ರಭಾವ, ವಿರೋಧ. ನವಾಬನ ಈ ವರ್ತನೆಯ ಇಂಗಿತವೇನೋ ನನಗೆ ತಿಳಿಯದಾಗಿದೆ." ಕೆಂದನಕೋವಿ ಬರಮಣ್ಣನು ಗೂಢ ಭಾವನೆಯಿಂದ ಪ್ರಶ್ನೆಯನ್ನು ಎತ್ತಿದನು.

ಮದಕರಿ ನಾಯಕನು ನಸುಹೊತ್ತು ಮತ್ತೆ ಯೋಚನೆಯಲ್ಲಿ ಮುಳುಗಿದನು. ಬಳಿಕ ಒಡಪನ್ನು ಬಿಡಿಸುವಂತೆ ಬಿಚ್ಚಿ ಮಾತಾಡಿದನು:

" ಅದರ ಗುಟ್ಟು ಹೀಗಿದೆ, ಬರಮಣ್ಣ ! ಬಲವಂತರಿಗೆ ಬಲವಂತರನ್ನು ಕಂಡರೆ ಆಗುವುದಿಲ್ಲ. ಕಿರಿ ಮೀನವನ್ನು ನುಂಗಿ ಹಿರಿಮೀನವಾಗುವಂತೆ ಪಾಳೆಗಾರನಾದ ಹೈದರ ಅಲಿ ಪಾತಶಹನಾಗಲು ಹವಣಿಸುತ್ತಿದ್ದಾನೆ. ಅದಕ್ಕಾಗಿ ಆತನಿಗೆ ನಮ್ಮ ಮೇಲೆ ಅಸೂಯೆ. ಆತನಿಗೆ ನಮ್ಮ ಸಹಕಾರವು ಇಷ್ಟವಿದ್ದರೂ ನಮ್ಮ ಸ್ವತಂತ್ರ ಜೀವನವು ಮಾತ್ರ ಸಹನವಾಗದು. ತಗ್ಗಿದರೂ ಬಗ್ಗುವುದಿಲ್ಲ ಎಂಬ ನಮ್ಮ ಗಂಡು ಬಿರುದು ಆತನ ಎದೆಯನ್ನು

ನೋಯಿಸುತ್ತಿದೆ. ಇದುವರೆಗೆ ಕಂಡದ್ದಾಯಿತು, ಕಾಯ್ದದ್ದಾಯಿತು. ಇನ್ನು ಮೇಲೆ ಆತನ ಸಖ್ಯವು ನಮಗೆ ಕುಪಥ್ಯ.”

ನಸುಹೊತ್ತು ನಿಶ್ಶಬ್ದವಾಗಿ ಕಳೆಯಿತು. ಅಷ್ಟರಲ್ಲಿ ಯೋಚಿಸಿ ಏನನ್ನು ಮಾತಾಡಬೇಕೆಂಬುದನ್ನು ಎಣಿಸಿ ನೋಡಿ ಕೆಂದನಕೋವಿ ಬರಮಣ್ಣನು ಧೈರ್ಯದಿಂದ ಮುಂದುವರಿದು ಹೀಗೆ ಸಲಹೆಯಿತ್ತನು. “ದೊರೆಗಳು ಪರಾಂಬರಿಸಬೇಕು. ಎಷ್ಟಾದರೂ ನವಾಬ ಹೈದರ ಆಲಿ ಬಲಿಷ್ಠನು, ಪದವಿಗೆ ಏರತಕ್ಕವನು. ಇಂತಹನ ದ್ರೋಹವನ್ನು ಕಟ್ಟಿಕೊಳ್ಳುವುದು ಅಪಾಯಕರವಲ್ಲವೆ ? ಇದು ಯುಕ್ತವೆ ?”

ಮದಕರಿನಾಯಕನು ಸಿಡುಕಿನಿಂದ ನುಡಿದನು. ಆತನ ವಾಣಿಯಲ್ಲಿ ನಿರ್ಧಾರವು ತಾನೇ ತಾನಾಗಿ ಮಿನುಗುತ್ತಿದ್ದಿತು. “ಆಗದು ಬರಮಣ್ಣ; ಖಂಡಿತವಾಗಿ ಆಗದು. ಈ ಕ್ಷಣದಿಂದ ಹೈದರ ಆಲಿ ನಮಗೆ ಪರಕೀಯನೇ ವಿನಾ ಸ್ವಕೀಯನಲ್ಲ. ಆತನನ್ನು ನಾವು ಎಷ್ಟು ವಿಧದಿಂದ ಒಲಿಸಿಕೊಳ್ಳಲು ಬಯಸಿದರೂ ಆತನು ನಮ್ಮ ಹಿತಸ್ಥನಾಗಲಾರನು. ಏಕೆಂದರೆ ನಾವು ಆತನ ನೆರೆಯವರು. ತಾನು ಬೆಳೆಯಬೇಕಾದರೆ ಆತನು ನಮ್ಮನ್ನು ತಿಂದು ತೇಗಲೇಬೇಕು. ಇದು ರಾಜನೀತಿ.

“ಪುಣೆಯ ಪೇಶವೆಯವರ ವಿಚಾರ ಹಾಗಿಲ್ಲ. ಅವರು ಬಲಿಷ್ಠರು. ಅವರಿಗೂ ನವಾಬ ಹೈದರ ಆಲಿಗೂ ಕಟ್ಟಿನ ಹಗೆತನವಿದೆ. ನಮ್ಮ ಸಹಾಯವನ್ನು ಪಡೆದು ಅವರು ಹೈದರ ಆಲಿಯ ಸದ್ದನ್ನು ಅಡಗಿಸಿದರೆ ನಮಗೆ ಲಾಭವಿದೆ. ಅವರಿಗೂ ಲಾಭವಿದೆ. ಯಾವ ದೃಷ್ಟಿಯಿಂದ ಆಲೋಚಿಸಿದರೂ ಪೇಶವೆಯವರ ಸ್ನೇಹದಿಂದ ನಮಗೆ ಹಿತವಿರುವುದಲ್ಲದೆ ಅಹಿತವಿಲ್ಲ. ಈಗ ನಾವು ಮಾಧವರಾಯರ ಸ್ನೇಹಯಾಚನೆಯನ್ನು ಕಡೆಗಣಿಸಿದರೆ ಇತ್ತ ಹೈದರ ಆಲಿಯ ಜೊತೆಗೆ ಅತ್ತ ಮರಾಟರೂ ನಮ್ಮ ದ್ವೇಷಿಗಳಾಗುವರು. ಬಲಿಷ್ಠರಿಬ್ಬರ ವೈರದಿಂದ ನಮ್ಮ ಅಸ್ತಿತ್ವಕ್ಕೆ ಸಂಚಕಾರ ಕೊಟ್ಟಂತೆ ಆದೀತು. ಆದ್ದರಿಂದ ಪುಣೆಯ ಸ್ನೇಹಹಸ್ತವನ್ನು ನಾವು ಸ್ವಾಗತಿಸಲೇಬೇಕಾಗಿದೆ. ಇದು ಖಂಡಿತ.”

ಮದಕರಿ ನಾಯಕನು ಒಂದು ನಿಮಿಷ ಮಾತನ್ನು ನಿಲ್ಲಿಸಿದನು. ಆತನ ನಿರ್ಧಾರದ ಅಭಿಪ್ರಾಯವನ್ನು ಕೇಳುತ್ತಿದ್ದ ಪರಿವಾರದವರು ಕತ್ತೆತ್ತಿ ಆತನ ಮುಖಮುದ್ರೆಯನ್ನು ದಿಟ್ಟಿಸಿದರು. ಅದರಲ್ಲಿ ಮೂಡಿದ ಗಂಭೀರ ನಿಶ್ಚಯದ ಬೆಳಕನ್ನು ಕಂಡು ಸ್ತಿಮಿತರಾದರು. ಮುಂದೆ ಯಾರೂ ಮಾತಾಡುವ ಗೊಡವೆಗೆ ಹೋಗಲಿಲ್ಲ. ನಾಯಕನು ರಾಯಸದ ರಂಗಣ್ಣನ ಕಡೆಗೆ ತನ್ನ ನೋಟವನ್ನು ಹೊರಳಿಸಿ ಹೇಳಿದನು:

" ರಂಗಣ್ಣ, ಅಭಿಪ್ರಾಯವು ಗೊತ್ತಾಯಿತಲ್ಲವೆ ? ಈ ವಿಧದ ಅಭಿಪ್ರಾಯವನ್ನು ಸೂಚಿಸಿ ಮಾಧವರಾಯರಿಗೆ ಮಾರೋಲೆಯನ್ನು ಬರೆಯಿರಿ. ನವಾಬ ಹೈದರ ಅಲಿಯ ವಿರುದ್ಧವಾಗಿ ಅವರಿಗೆ ಬೇಕಾದ ಸಹಾಯವನ್ನೆಲ್ಲ ಒದಗಿಸಲು ನಾವು ಸಿದ್ಧರಿರುವೆವೆಂದು ತಿಳಿಸಿ, ಸದ್ಯ ಯಾವಲ್ಲಿಗೆ ಎಷ್ಟು ದಂಡನ್ನು ಕಳುಹಬೇಕು ಎಂಬುದನ್ನು ವಿಚಾರಿಸಿರಿ. ತಿಳಿಯಿತೇ ? "

ರಾಯಸದ ರಂಗಣ್ಣನು ಉತ್ತರವಿತ್ತನು. " ತಿಳಿಯಿತು ಮಹಾಸ್ವಾಮೀ ! ಹಾಗೆಯೇ ಕಾಗದ ಬರೆದುಕೊಂಡು ತರುವೆ. "

[ ೨ ]

ಸ್ವಲ್ಪ ದಿನಗಳಲ್ಲಿ ಮದಕರಿ ನಾಯಕನಿಗೆ ಪೇಶವಾ ಮಾಧವರಾಯನಿಂದ ಉತ್ತರ ಬಂದಿತು. ಆ ಮೇರೆಗೆ ನಾಯಕನು ದೊಡ್ಡ ದಂಡನ್ನು ತೆಗೆದುಕೊಂಡು ಮರಾಟರ ಸಹಾಯಕ್ಕೆ ಹೊರಟನು. ಹೈದರ ಅಲಿಯ ಪ್ರದೇಶದಲ್ಲಿ ದಾಳಿಯಿಟ್ಟು ನುಗ್ಗಿಹಳ್ಳಿ, ಹಾಗಲವಾಡಿ, ಬಾಣಾವರ, ಮೊದಲಾದ ಕೋಟೆಗಳನ್ನು ಕಿತ್ತುಕೊಂಡು ಮರಾಟರ ಪಾಳೆಯಗಳನ್ನು ಸ್ಥಾಪಿಸಿದನು. ಈ ಸಹಾಯದಿಂದ ಮಾಧವರಾಯನು ಸಂತುಷ್ಟನಾದನು. ನಾಯಕನನ್ನು ಸತ್ಕರಿಸಿ ಗೌರವಿಸಿದನು. ತಾನು ಬಂದ ಕಾರ್ಯವು ಜಯಪ್ರದವಾದುದಕ್ಕೆ ಆನಂದಿತನಾಗಿ ತನ್ನ ರಾಜ್ಯಕ್ಕೆ ಮರಳಿದನು.

ಕೆಲ ದಿನಗಳು ಕಳೆದ ಬಳಿಕ ಮಾಧವರಾಯನು ಪುನಃ ದಕ್ಷಿಣದಲ್ಲಿ ದಂಡಯಾತ್ರೆ ಮಾಡಿದನು. ಹೈದರ ಅಲಿಯ ರಾಜ್ಯದಲ್ಲಿ ನುಗ್ಗಿ ಕೋಟೆ

ಕೊತ್ತಳಗಳನ್ನು ಕೈವಶ ಮಾಡುತ್ತ ಆನವಟ್ಟಿಗೆ ಬಂದನು. ಆ ಕೋಟೆಗೆ ಮುತ್ತಿಗೆ ಹಾಕಿದನು. ಈ ಕೋಟೆ ದುರ್ಭೇದ್ಯವಾಗಿದ್ದು ಇದರಲ್ಲಿ ಹೈದರ ಅಲಿ ದೊಡ್ಡ ಸೇನೆಯನ್ನು ಇರಿಸಿದ್ದನು.

ಮಾಧವರಾಯನು ಮತ್ತೆ ಮದಕರಿನಾಯಕನಿಗೆ ಸಹಾಯವನ್ನು ಕೇಳಿದನು. ಹಿಂದಿನ ಪ್ರಸಂಗದಿಂದ ಮಾಧವರಾಯನಿಗೂ ಮದಕರಿನಾಯಕನಿಗೂ ಸ್ನೇಹಸಂಬಂಧವು ಉಂಟಾಗಿದ್ದಿತು. ಮಾಧವರಾಯನು ಮದಕರಿನಾಯಕನ ಮೈತ್ರಿಯನ್ನು ಬಹುವಾಗಿ ಗೌರವಿಸುತ್ತಿದ್ದನು. ಆದುದರಿಂದ ಈ ಬಾರಿಯಾದರೂ ಮಾಧವರಾಯನಿಗೆ ಸಹಾಯಮಾಡುವುದಾಗಿ ಮದಕರಿನಾಯಕನು ನಿಶ್ಚಯಿಸಿದನು. ಆ ಮೇರೆಗೆ ಮದಕರಿನಾಯಕನು ಅತ್ಯುತ್ಸಾಹದಿಂದ ಸುಸಜ್ಜಿತವಾದ ಸೇನೆಯೊಂದಿಗೆ ಹೊರಟು ಆನವಟ್ಟಿಗೆ ಬಂದನು. ಇದರಿಂದ ಆನವಟ್ಟಿ ಕೋಟೆಗೆ ಮುತ್ತಿಗೆ ಹಾಕಿದ ಮರಾಟರ ದಂಡಿನ ಧೈರ್ಯವು ಇಮ್ಮಡಿಸಿತು.

ಮದಕರಿನಾಯಕನು ಅಲ್ಪಾವಕಾಶದಲ್ಲಿ ಕೋಟೆಯ ಸ್ಥಿತಿಗತಿಯನ್ನು ಮತ್ತು ಶತ್ರುಪಕ್ಷದ ಬಲಾಬಲವನ್ನು ಅರಿತುಕೊಂಡನು. ಕೋಟೆಯನ್ನು ವಶಪಡಿಸಿಕೊಳ್ಳುವ ಉಪಾಯವನ್ನು ಯೋಚಿಸಿದನು. ಹೊರಗಿನ ಮುತ್ತಿಗೆಯ ಕೆಲಸವನ್ನು ಜಾಗ್ರತೆಯಾಗಿ ಮರಾಟರು ನೋಡಿಕೊಳ್ಳಬೇಕೆಂದು ಗೊತ್ತು ಪಡಿಸಿದನು. ಕೋಟೆಯ ಮೇಲೆ ಏರಾಟ ಮಾಡಿ ಅದನ್ನು ಗೆದ್ದುಕೊಳ್ಳುವ ಹೊಣೆಯನ್ನು ತಾನೇ ಹೊತ್ತುಕೊಂಡನು. ಈ ಕಾರ್ಯಗಳಿಗೆ ಅನುಕೂಲವಾಗುವಂತಹ ಸರ್ವಸಿದ್ಧತೆಯನ್ನು ಮಾಡಿದನು.

ಚಿತ್ರದುರ್ಗದವರು ಸಾಹಸವನ್ನು ಎಸಗಲು ಅಣಿಯಾದರು. ಶೌರ್ಯಾತಿಶಯದಿಂದ ಕೋಟೆಯ ಮೇಲೆ ಅಪ್ಪಳಿಸಿದರು. ಮದಕರಿನಾಯಕನು ಅದ್ಭುತವಾದ ಪರಾಕ್ರಮವನ್ನು ಪ್ರದರ್ಶಿಸಿದನು. ಚಿತ್ರದುರ್ಗದವರ ಆರ್ಭಟೆ ಮಿಗಿಲಾಯಿತು. ಇವರ ಪ್ರತಾಪವನ್ನು ಸಹಿಸಲಾರದೆ ಹೈದರ ಅಲಿಯ ಸೈನ್ಯದವರು ಹತಬಲರಾದರು. ಹಾಂ ಹಾಂ ಎನ್ನುವಷ್ಟರಲ್ಲಿ ಚಿತ್ರದುರ್ಗದ ವಿಜಯಧ್ವಜವು ಆನವಟ್ಟಿ ಕೋಟೆಯ ಮೇಲೆ ಹಾರಾಡತೊಡಗಿತು.

ಮದಕರಿನಾಯಕನ ಸಮರದಾಹವು ಶತ್ರುಗಳ ಪರಾಭವದಿಂದ ತಣಿಯಲಿಲ್ಲ. ಹೈದರ ಅಲಿಯ ದಂಡಿನಲ್ಲಿ ಒಬ್ಬನನ್ನೂ ಜೀವದಿಂದ ಬಿಡದೆ ಸರ್ವಸಂಹಾರಮಾಡಿ ಹಗೆಯ ಹುಟ್ಟನ್ನು ಅಡಗಿಸಬೇಕೆಂದು ಆತನು ನಿರ್ಧಾರ ಮಾಡಿದನು. ತನ್ನ ಸೈನಿಕರನ್ನು ಉದ್ದೇಶಿಸಿ ವಿಜಯೋನ್ಮಾದದಿಂದ ಆತನು ಹೀಗೆ ಭಾಷಣ ಮಾಡಿದನು:

“ನನ್ನ ನಚ್ಚಿನ ಬಂಟರೆ! ಈ ಸುದಿನಗಳ ವರೆಗೆ ಅಪೂರ್ಣವಾಗಿ ಉಳಿದಿದ್ದ ನನ್ನ ಮನಸ್ಸಿನಲ್ಲಿಯ ಒಂದು ಆಸೆ ಇಂದು ಪೂರ್ಣವಾಗುವ ಸಂದರ್ಭವು ಬಂದಿದೆ. ಅದರಿಂದ ನನಗೆ ಬಹಳ ಸಂತೋಷವೆನಿಸಿದೆ. ಅರಿರುಂಡೆಗಳನ್ನು ಚಂಡಾಡಬೇಕೆಂಬುದೇ ಆ ನನ್ನ ಆಸೆ. ಈ ಚಂಡಾಟದಲ್ಲಿ ನೀವೆಲ್ಲರು ನನ್ನ ಒಡನಾಡಿಗಳಾಗಬೇಕು. ಈ ಚಂಡಾಟವು ಪೂರ್ತಿಯಾಗಲು ರಣದೇವತೆಯ ಪೂಜೆಯನ್ನು ನೆರವೇರಿಸುವೆ. ಈ ಪೂಜೆಯ ಸಾಹಿತ್ಯವನ್ನಾದರೂ ನೀವು ನನಗೆ ಒದಗಿಸಿ ಕೊಡಬೇಕು. ನಿಮ್ಮ ಖಡ್ಗದಿಂದ ಹತರಾದ ವೈರಿಯ ಶಿರಃಕಮಲಗಳು, ಕರುಳ ಮಾಲೆಗಳು ರಕ್ತ ಮಾಂಸಗಳು; ಇದುವೆ ನನ್ನ ಪೂಜಾಸಾಹಿತ್ಯ. ಹಂ ವೀರರೇ! ನುಗ್ಗಿರಿ, ದುಡುಕಿರಿ, ದುಮುಕಿರಿ. ಇರಿಯಿರಿ, ಕಡಿಯಿರಿ, ತುಂಡರಿಸಿರಿ. ಖಣ್ ಖಣಲ್ ಖಣ್! ಹೋ ಹೋ ಹೋ! ಜಯ ಚಾಮುಂಡಿ!!”

ಮದಕರಿನಾಯಕನ ಈ ಉದ್ಗಾರಗಳಿಂದ ದಂಡಾಳುಗಳು ಉದ್ರೇಕಗೊಂಡರು. ರಣಮತ್ತರಾದ ಅವರು ಹಗೆಗಳ ಮೇಲೆ ಮುಗಿಬಿದ್ದು ಕಗ್ಗೊಲೆಯನ್ನು ಪ್ರಾರಂಭಿಸಿದರು. ಬಿರುಗಾಳಿಯ ಹುಯ್ಲಿಗೆ ಹಣ್ಣುಕಾಯಿಗಳು ಪಳಪಳನೆ ಉದುರುವಂತೆ ಅವರ ಆಯುಧಗಳ ಆಘಾತದಿಂದ ಅರಿಮಸ್ತಕಗಳು ಕಳಚಿಬೀಳತೊಡಗಿದುವು. ಸ್ವಲ್ಪ ಹೊತ್ತಿನಲ್ಲಿ ನರದಲೆಗಳ ಒಂದು ರಾಶಿಯೇ ಅಲ್ಲಿ ನಿರ್ಮಾಣವಾಯಿತು.

ಮದಕರಿನಾಯಕನು ಆನಂದಪರವಶನಾಗಿ ಪೇಶವೆ ಮಾಧವರಾಯನನ್ನು ಅಲ್ಲಿಗೆ ಕರೆಯಿಸಿದನು. ಮಾಧವರಾಯನು ಬರಲು ತನ್ನ ರಣರಕ್ಕಸತನದ ಪ್ರತ್ಯಕ್ಷ ಸ್ಮಾರಕದಂತಿರುವ ಆ ರಾಶಿಯನ್ನು ಆತನಿಗೆ ತೋರಿಸಿ ನಾಯಕನು ವೀರಚೇಷ್ಟೆಯನ್ನು ಮಾಡುತ್ತ ಚೀತ್ಕಾರದನಿಯಲ್ಲಿ ನುಡಿದನು:

"ಬನ್ನಿ ಮಾಧವರಾವ್! ಇಕೋ ನೋಡಿ; ತಾವು ಶ್ರೀಮಂತರು, ಪುಣೆಯ ಅರಸರು. ತಮಗಾಗಿ ಶತ್ರುಶಿರೋರತ್ನಗಳ ಈ ವೀರಸಿಂಹಾಸನವು ಸಿದ್ಧವಾಗಿದೆ. ದಯೆಮಾಡಿ ಇದನ್ನು ಅಲಂಕರಿಸಿರಿ. ಬಳಿಕ ತಮಗೆ ವೀರಾಭಿಷೇಕ ಮಾಡುವೆ."

ಮಾಧವರಾಯನು ಸ್ತಂಭಿತನಾದನು. ಮರುಳು ಹಿಡಿದವನಂತೆ ಒಮ್ಮೆ ಆ ರುಂಡರಾಶಿಯತ್ತ, ಇನ್ನೊಮ್ಮೆ ಮದಕರಿನಾಯಕನತ್ತ ನೋಟ ವನ್ನು ನಿಟ್ಟಿಸಿ ಅವಾಕ್ಕಾಗಿ ನಿಂತುಕೊಂಡನು.

ಘೋರವಾದ ರಣಾಂಗಣ. ಎಲ್ಲೆಲ್ಲಿಯೂ ಛಿನ್ನವಿಚ್ಛಿನ್ನವಾಗಿ, ವಿರೂಪ ವಾಗಿ, ವಿಕಟವಾಗಿ, ಕರಾಲವಾಗಿ, ಅಸ್ತವ್ಯಸ್ತವಾಗಿ ಬಿದ್ದುಕೊಂಡಿರುವ ನರದೇಹಗಳು. ಎಲುವಿನ ದಿನ್ನೆಗಳಿಂದ ಹನಿಯಿಟ್ಟು, ಮಾಂಸದ ಕೆಸರಿ ನಿಂದ ಬಸಿದು ಬರುವ ಕೆನ್ನೀರು ಕಾಲುವೆಗಳಾಗಿ ಹರಿದಿದೆ. ಔತಣ ಕೊಟ್ಟಂತೆ ಎಲ್ಲೆಲ್ಲಿಂದಲೋ ಹಾರಿ ಹಾರಿ ಬಂದು ಗುಂಪು ಗುಂಪಾಗಿ ನೆರೆದಿರುವ ಕಾಗೆ, ಗೂಗೆ, ಹಾಳೆಹದ್ದುಗಳ ಕ್ರೂರ ಕರ್ಕಶ ಅಮಂಗಲ ಸ್ವರಗಳು ಕಿವಿಯನ್ನು ಗಡಚಿಕ್ಕುತ್ತಿವೆ. ಇವುಗಳ ಮಧ್ಯದಲ್ಲಿ ಅಡಕಿಲೇರಿದ ಆ ಭಯಾನಕ ರುಂಡಗಳ ರಾಶಿ. ಅದರ ಪಕ್ಕದಲ್ಲಿ ಭೈರವನಂತೆ ವೀರಾವೇಶ ದಿಂದ ವಿಕಟಹಾಸ್ಯ ಮಾಡುತ್ತ ನಿಂತಿದ್ದ ಮದಕರಿನಾಯಕ! ಮಾಧವ ರಾಯನ ಮೈ ಜುಮ್ಮೆಂದಿತು.

"ದಯಮಾಡಿಸಿ ಶ್ರೀಮಂತ ಮಾಧವರಾವ್! ದಯಮಾಡಿಸಬೇಕು, ಸ್ವಾಮೀ!" ಮದಕರಿನಾಯಕನು ಮತ್ತೆ ಆಹ್ವಾನವಿತ್ತನು.

ಮಾಧವರಾಯನು ಬೆಚ್ಚಿಬಿದ್ದನು. ಕುತ್ತುಸಿರು ಬಿಡುತ್ತ ಕನಿಕರದ ದನಿಯಿಂದ ಕೇಳಿಕೊಂಡನು: "ಕ್ಷಮಿಸಿ ನಾಯಕರೆ! ದಯೆಯಿಟ್ಟು ನನ್ನನ್ನು ಕ್ಷಮಿಸಿ. ಈ ಮಾನಕ್ಕೆ ನಾನು ಅರ್ಹನಲ್ಲ. ಇಂದಿನ ವಿಜಯದ ಶ್ರೇಯಸ್ಸು ತಮ್ಮದೆ ಆಗಿರುವುದರಿಂದ ಈ ಮಾನಕ್ಕೆ ತಾವೇ ಅರ್ಹರು. ಏಕೋ, ನನಗೆ ಹೇಗೆ ಹೇಗೋ ಅನಿಸುತ್ತದೆ. ಇಲ್ಲಿ ನಿಲ್ಲಲಾರೆ, ಹೋಗುವೆ; ಅಪ್ಪಣೆಕೊಡಿ."

" ಕೊಂಚ ತಾಳಿ, ಮಾಧವರಾಯರೇ ! ಹೀಗೇಕೆ ಮಾಡುವಿರಿ ? ನೀವು ಶೂರರಲ್ಲವೆ ? " ನಾಯಕನು ನಸುನಕ್ಕು ಕೇಳಿದನು.

" ಶೂರನಹುದು. ಆದರೆ ಇಂತಹ ಶೂರನಲ್ಲ. ನಾನು ಬ್ರಾಹ್ಮಣ. ಇಷ್ಟುಮಟ್ಟಿಗೆ ಕಠೋರ ಕೆಲಸಕ್ಕೆ ಕೈಹಾಕುವುದು ಬ್ರಾಹ್ಮಣನಿಗೆ ಸಾಧ್ಯವಿಲ್ಲ. ಅದಕ್ಕೆ ಕ್ಷತ್ರಿಯನೇ ತಕ್ಕವನು. ನಾನು ಹೋಗುವೆ. ನಾಯಕರೇ ಅಪ್ಪಣೆಕೊಡಿ " ಮಾಧವರಾಯನು ಗಾಬರಿಯಾದವನಂತೆ ಬಿನ್ನವಿಸಿದನು.

" ಕೊಂಚ ತಾಳಿ. ಹೀಗೇಕೆ ಮಾಡುವಿರಿ ಮಾಧವರಾವ ! ನಿಮಗೆ ಬೇಡವಾದರೆ ಬಿಡಿ. ಇಂದು ರಣದೇವತೆಯ ಉತ್ಸವ. ಆ ದೇವಿಯ ಪ್ರೀತಿಗೋಸುಗ ನಾನೀ ವೀರವ್ರತವನ್ನು ಆಚರಿಸುವೆ. ತಾವು ಬ್ರಾಹ್ಮಣರು, ಸಾಕ್ಷಿಯಾಗಿ ನಿಂತು ಅದನ್ನು ಸಾಂಗಗೊಳಿಸಿರಿ. "

ಹೀಗೆ ನುಡಿದ ಮದಕರಿನಾಯಕನು ಆ ರಾಶಿಯ ಮಧ್ಯದಲ್ಲಿ ನಿಂತುಕೊಂಡನು. ನರರಕ್ತದ ಅಭಿಷೇಕ ಮಾಡಿಸಿಕೊಂಡನು. ಕೊರಳಲ್ಲಿ ಕರುಳಿನ ಮಾಲೆಯನ್ನು ಹಾಕಿಕೊಂಡು ಉತ್ಸಾಹದಿಂದ ನರ್ತನ ಮಾಡುತ್ತ ತನ್ನ ಸೈನಿಕರನ್ನು ಉದ್ದೇಶಿಸಿ ಭಾಷಣ ಮಾಡಿದನು:

" ವೀರರೇ ! ಸಂಗ್ರಾಮ ದೇವತೆಯ ಈ ಉತ್ಸವವನ್ನು ನೀವಾದರೂ ಉಚಿತ ರೀತಿಯಿಂದ ಆಚರಿಸಿರಿ. ಹಗೆಯ ತಲೆಬುರುಡೆಗಳನ್ನು ಒಲೆಗುಂಡು ಮಾಡಿರಿ. ಡವಗೆಯೆಂಬ ಪಾತ್ರೆಯಲ್ಲಿ ಮೃಗಪಕ್ಷಿಗಳ ಮಾಂಸವನ್ನು ಬೇಯಿಸಿರಿ. ರಣದೇವಿಗೆ ನೈವೇದ್ಯ ತೋರಿಸಿರಿ. ದಿಗ್ಬಲಿಯನ್ನು ನೀಡಿರಿ, ಹಬ್ಬದೂಟ ಮಾಡಿರಿ. ಹೋ ಹೋ ಹೋ ! ಜಯ ಚಾಮುಂಡಿ ! "

ಸೈನಿಕರೆಲ್ಲರು ಜಯಜಯಕಾರ ಮಾಡಿದರು; "ಮಹಾರಾಜ ಛತ್ರಪತಿ ಖಡೇ ಯಶವಂತ ಪರಬಲಬಡಬಾನಲ ಅರಿರಾಜ ಮಾನಮರ್ದನ ಅರಿಕಲಭ ಕಂಠೀರವ ವೀರ ಮದಕರಿರಾಜ ಜೈ ಜೈ!" ಈ ಜಯಘೋಷವು ದಿಗಂತರಾಳವನ್ನು ವ್ಯಾಪಿಸಿತು.

ಈ ದೃಶ್ಯವನ್ನು ಮಾಧವರಾಯನು ಎವೆಯಿಕ್ಕದೆ ನೋಡಿದನು.

ಕವಿಯಿತು. ಆ ಕತ್ತಲೆಯಲ್ಲಿ ಆತನಿಗೆ ತಾನು ಎಲ್ಲಿಯೋ ದೂರ ಹೋದಂತೆ ಭಾಸವಾಯಿತು. ಒಂದು ದೃಶ್ಯವನ್ನು ಕಂಡಂತಾಯಿತು. ಆ ದೃಶ್ಯವು ಹೀಗೆ.

ಒಂದು ಸಮರಾಂಗಣ. ಸುತ್ತಲು ಗಾಯಗೊಂಡ, ಹತರಾದ ವೀರರ ದೇಹಗಳು ಹಾಸಿಕೊಂಡಿವೆ. ನಡುವೆ ಒಬ್ಬ ಆಜಾನುಬಾಹು ಮಹಾವೀರ ಕಾಣಿಸುತ್ತಿದ್ದಾನೆ. ಆತನ ಕೆಳಗೆ ಇನ್ನೊಬ್ಬ ವೀರನು ಮರ್ಮಾಹತನಾಗಿ ಮಲಗಿಕೊಂಡಿದ್ದಾನೆ. ಮಹಾವೀರನು ಬಿದ್ದವನ ದೇಹದ ಮೇಲೆ ವೀರಾಸನದಲ್ಲಿ ಕುಳಿತಿದ್ದಾನೆ. ಆತನ ಎದೆಯನ್ನು ಬಗೆದಿದ್ದಾನೆ. ಪುಟನೆಗೆದು ಬರುವ ಬಿಸಿ ಬಿಸಿ ನೆತ್ತರವನ್ನು ಬೊಗಸೆಯಿಂದ ಎತ್ತಿ ಮೈಮೇಲೆ ತೂರಿಕೊಳ್ಳುತ್ತಿದ್ದಾನೆ. ಕರುಳಿನ ಮಾಲೆಯನ್ನು ಹಾಕಿಕೊಂಡಿದ್ದಾನೆ. ವಿಕಟ ಹಾಸ್ಯ ಮಾಡುತ್ತಿದ್ದಾನೆ. ಅಸ್ಪಷ್ಟರಲ್ಲಿ ಆ ವೀರನ ಬಾಯಿಯಿಂದ ಹೊರಟ ಕರ್ಕಶವಾದ ಈ ಮಾತುಗಳು ಕೇಳಿಸಿದಂತಾಯಿತು.

"ಎಲವೋ ದುರಾತ್ಮಾ! ನೀನು ಎಸಗಿದ ಒಂದೊಂದು ಅಧಮ ಕೃತಿಗೆ ಒಂದೊಂದಾಗಿ ಈ ದಾರುಣ ಕ್ಲೇಶವನ್ನು ಅನುಭವಿಸುವವನಾಗು. ಇಕೋ, ಇದು ವಿಷಾನ್ನ ಉಣಿಸಿದುದಕ್ಕೆ! ಇದು ಲಾಕ್ಷಾಗೃಹದಾಹಕ್ಕೆ! ಇದು ಪಾಂಚಾಲೀವಸ್ತ್ರಾಪಹರಣಕ್ಕೆ! ........ ಹೋ ಹೋ ಹೋ!"

ಮಾಧವರಾಯನು ಫಕ್ಕನೆ ಎಚ್ಚತ್ತನು. ಕಣ್ಣುಬಿಟ್ಟು ನೋಡಿದನು. "ಹೋ ಹೋ ಹೋ" ಎಂಬ ಮದಕರಿನಾಯಕನ ಹೃದಯವಿದಾರಕ ಕೇಕೆ ಆತನ ಎದೆಯಲ್ಲಿ ಮಾರ್ದನಿಗೊಂಡಿತು.

ಮಾಧವರಾಯನು ಧೈರ್ಯ ತಂದುಕೊಂಡು ಮಾತನಾಡಿದನು: "ಸಾಕು ಬಿಡಿ, ಮದಕರಿನಾಯಕರೇ! ನಿಮ್ಮ ವ್ರತಾಚರಣೆ ಸಾಂಗವಾಯಿತಷ್ಟೇ? ಈ ನಿಮ್ಮ ವಿಚಿತ್ರ ಕ್ರೀಡೆಗಳು ಎಂತಹ ಕಡುಗಲಿಯ ಜೀವಾಳವನ್ನೂ ಕಳವಳಗೊಳಿಸುವುವು. ಸಾಕು ಬನ್ನಿ."

ಮದಕರಿನಾಯಕನು ಈಚೆಗೆ ಬಂದನು. ಈ ಹೊತ್ತಿಗೆ ಎಲ್ಲೆಡೆಯಲ್ಲಿಯೂ ಹಗೆಯನ್ನು ಹಣಿವ ಕೆಲಸವು ಮುಗಿತಾಯಕ್ಕೆ ಬಂದಿದ್ದಿತು. ಚಿತ್ರದುರ್ಗದವರ ಭಯಂಕರ ಸಾಹಸಕೃತಿಗಳಿಂದ ಶತ್ರುಗಳು ಗರ್ಭಗಲಿತ

ರಾದರು. ಅಳಿದುಳಿದ ಹೈದರ ಅಲಿಯ ಸೈನಿಕರು ಶ್ರೀರಂಗಪಟ್ಟಣಕ್ಕೆ ಓಡಿಹೋದರು.

ಅಂದಿನಿಂದ ನವಾಬ ಹೈದರ ಅಲಿ ಚಿತ್ರದುರ್ಗದ ಬದ್ಧ ವೈರಿಯಾದನು. ಹಗಲಿರುಳು ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಚಿತ್ರದುರ್ಗದ ವಿನಾಶದ ಉಪಾಯವನ್ನು ಚಿಂತಿಸತೊಡಗಿದನು ಬಹಿರಂಗವಾಗಿ ದಂಡಯಾತ್ರೆ ಮಾಡಿದರೆ ಈ ಉದ್ದೇಶವು ಫಲಿಸುವಂತಿರಲಿಲ್ಲ. ಏಕೆಂದರೆ ಮದಕರಿನಾಯಕನಿಗೆ ಮರಾಟರ ಬೆಂಬಲವಿದ್ದಿತು. ಆದುದರಿಂದ ಭೇದೋಪಾಯದಿಂದ ತನ್ನ ಕಾರ್ಯವನ್ನು ಸಾಧಿಸಬೇಕೆಂದು ಬಗೆದನು. ಯಾವುದಾದರೊಂದು ಹಂಚಿಕೆ ಮಾಡಿ ನಾಯಕನನ್ನು ಚಿತ್ರದುರ್ಗದಿಂದ ಅಗಲಿಸಿ ಸೆರೆಹಿಡಿಯಬೇಕೆಂದು ಯೋಚಿಸಿದನು. ಇತ್ತ ಈ ಸುಳಿವನ್ನು ತಿಳಿದು ಮದಕರಿನಾಯಕನು ಜಾಗರೂಕನಾಗಿಯೇ ಇದ್ದನು.

ದಿನಗಳು ಕಳೆದುವು. ಚಿತ್ರದುರ್ಗದವರು ಹೈದರ ಅಲಿಗೆ ಕೊಡತಕ್ಕ ಪೊಗದಿ ನಿಂತುಹೋಯಿತು. ಪೊಗದಿಯನ್ನು ತಂದೊಪ್ಪಿಸಬೇಕೆಂದು ಹೈದರ ಅಲಿ ಹೇಳಿಕಳುಹಿದನು. ಮದಕರಿನಾಯಕನು ತಾನೂ ಹೋಗಲಿಲ್ಲ, ಪೊಗದಿಯನ್ನೂ ಕಳುಹಲಿಲ್ಲ. ಹೈದರ ಅಲಿ ಮತ್ತೊಮ್ಮೆ ಹೇಳಿಕಳುಹಿದನು. ನಾಯಕನು ಅದಕ್ಕೂ ಸೊಪ್ಪು ಹಾಕಲಿಲ್ಲ.

ಆಗ ಹೈದರ ಅಲಿ ದಂಡನ್ನು ಎತ್ತಿಕೊಂಡು ತಾನೇ ಹೊರಟನು. ಚಿತ್ರದುರ್ಗ ಸಂಸ್ಥಾನದ ಸೀಮೆಗೆ ಬಂದು ತಲುಪಿದನು. ಪೊಗದಿಯನ್ನು ಕಳುಹಬೇಕು. ಇದಲ್ಲದೆ ಮಹತ್ತರವಾದ ಒಂದು ರಾಜಕೀಯ ವಿಷಯದಲ್ಲಿ ಮಂತ್ರಾಲೋಚನೆ ಮಾಡಬೇಕಾಗಿದೆ. ಅದಕ್ಕಾಗಿ ತಪ್ಪದೆ ಬಂದು ಸಮಕ್ಷಮ ಭೆಟ್ಟಿಯಾಗಬೇಕು. ಎಂಬುದಾಗಿ ಹೈದರ ಅಲಿ ಮದಕರಿನಾಯಕನಲ್ಲಿಗೆ ಸಾಂಡಣಿ ಸವಾರರನ್ನು ಅಟ್ಟಿದನು.

ಮದಕರಿನಾಯಕನು ತನ್ನ ರಾಯಭಾರಿಗಳ ಜೊತೆಯಲ್ಲಿ ಪೊಗದಿಯನ್ನು ಕಳುಹಿದನು. ಮೈಯಲ್ಲಿ ಸರಿಯಿಲ್ಲದುದರಿಂದ ತಾನು ಬರಲಿಕೆ ಆಗುವುದಿಲ್ಲವೆಂದು ತಿಳಿಸಿದನು.

ತನ್ನ ಯುಕ್ತಿ ಫಲಿಸಲಿಲ್ಲವೆಂದು ಹೈದರ ಅಲಿ ಸಿಡಿಮಿಡಿಗೊಂಡನು. ಆದರೂ ತನ್ನ ದುಗುಡವನ್ನು ತೋರಗೊಡದೆ ಚಿತ್ರದುರ್ಗದ ರಾಯಭಾರಿಗಳನ್ನು ಮರ್ಯಾದೆಯಿಂದ ಉಪಚರಿಸಿದನು. ಕುಶಲ ಪ್ರಶ್ನೆಯಾದ ಬಳಿಕ ಹೈದರ ಅಲಿ ಮತ್ತು ಚಿತ್ರದುರ್ಗದ ರಾಯಭಾರಿಗಳ ಮುಖ್ಯ, ಇವರ ನಡುವೆ ಹೀಗೆ ಸಂವಾದವು ನಡೆಯಿತು:

"ವಕೀಲರೆ, ಏಕೆ ನಿಮ್ಮ ರಾಜಾಸಾಹೇಬರು ಬರಲಿಲ್ಲ ?"

"ಬರಲಿಲ್ಲ, ನವಾಬ ಸಾಹೇಬ."

"ಏಕೆ ಬರಲಿಲ್ಲ ?"

"ಮೈಯಲ್ಲಿ ಸರಿಯಿಲ್ಲ, ನವಾಬ ಸಾಹೇಬ."

"ನಮ್ಮನ್ನು ಕಾಣುವ ಸಂದರ್ಭ ಬಂದರೆ ಅವರಿಗೆ ಯಾವಾಗಲೂ ಹೀಗೆಯೇ ಆಗುತ್ತದೆ! ನಮಗೇಕೆ ಹೆದರುವರೋ ನಿಮ್ಮ ದೊರೆಗಳು ?"

"ಹೆದರಿಕೆ ಏತರದು ? ಮೈಯಲ್ಲಿ ಸೊಗಸಿರದಿದ್ದರೆ ಏನು ಮಾಡುವುದು ನವಾಬ ಸಾಹೇಬ ?"

"ಎಷ್ಟು ಸಲ ಹೇಳಿ ಕಳಿಸಿದ್ದಾಯಿತಲ್ಲ !"

"ಆತುರವೇಕೆ ಇಷ್ಟು ನವಾಬಸಾಹೇಬ ?"

"ಹಾಂ, ಹಾಗೇನೂ ಇಲ್ಲ. ನಿಮ್ಮ ದೊರೆಗಳು ಭಾರಿ ಖಟಾಟೋಪದಲ್ಲಿ ಇದ್ದಾರೆ, ಎಂದು ಕೇಳಿದ್ದೇವೆ. ದಂಡಿನ ಸರಂಜಾಮು ಜೋರಾಗಿ ನಡೆದಿದೆ ಅಂತೆ. ಏನು, ನಮ್ಮ ಮೇಲೆ ದಾಳಿ ಮಾಡುವ ಹೊಂಚು ಇದೆಯೆ ?"

"ಅದು ಒಂದೂ ನಮಗೆ ತಿಳಿಯದು, ನವಾಬ ಸಾಹೇಬ."

"ದುರ್ಗದ ಸೀಮೆಯ ಆದಾಯವೆಷ್ಟು, ವಕೀಲರೆ? ಜಾಗಾ ನಾಮರ್ದ ಅದೆ. ಮಳೆ ಬಾರದೆ ಇದ್ದರೆ ಜನಗಳ ಹೊಟ್ಟೆಗೆ ಅನ್ನವಿಲ್ಲ; ಕುಡಿಯಲಿಕ್ಕೆ ನೀರಿಲ್ಲ. ಕೋಟೆಯೊಳಗೆ ಆಹಾರಸಾಮಗ್ರಿ ಇಲ್ಲ. ಬೊಕ್ಕಸದಲ್ಲಿ ಹಣದ ಭರತಿಯಿಲ್ಲ. ದಂಡಿನ ಸಂಬಳ ಸರಿಯಾಗಿ ಮುಟ್ಟುವುದಿಲ್ಲ. ಜನಗಳು ಆಡಳಿತಕ್ಕೆ ಬೇಸತ್ತಿರುವರು. ಸಂಸ್ಥಾನದ ಸ್ಥಿತಿ ಮೇಲೆ ಡೊಳ್ಳು, ಒಳಗೆ ಪೊಳ್ಳು ಇದೆ ಎಂದು ಕೇಳಿದ್ದೇವೆ. ನಿಜವಷ್ಟೇ, ವಕೀಲರೆ ?"

"ಯಾರು ಹೇಳಿದರು ತಮಗೆ, ನವಾಬ ಸಾಹೇಬ? ಇಂತಹ ಖೊಟ್ಟಿ ವರ್ತಮಾನಗಳ ಮೇಲೆ ತಮ್ಮಂತಹರು ವಿಶ್ವಾಸವಿಡುವುದು ಆಶ್ಚರ್ಯದ ವಿಷಯ. ಹನ್ನೆರಡು ವರ್ಷ ಬರ ಬಿದ್ದರೂ ನಮ್ಮ ಅನ್ನಸಾಮುಗ್ರಿ ಸರಿಯು ವಂತೆ ಇಲ್ಲ. ಎಂತಹ ಅನಾವೃಷ್ಟಿಕಾಲದಲ್ಲಿಯೂ ನೀರು ಇರಬೇಕು ಎಂದು ಪೂರ್ವದಲ್ಲಿ ರಸಸಿದ್ಧರು ಅನುಗ್ರಹಮಾಡಿದ್ದಾರೆ. ಸೈನ್ಯದವರು ಸಂತುಷ್ಟ ರಾಗಿದ್ದು ಸಂಗ್ರಾಮಕ್ಕೆ ಸದಾ ಸಿದ್ಧರಾಗಿರುತ್ತಾರೆ. ಮದ್ದು, ಗುಂಡು, ಕೋವಿ, ಫಿರಂಗಿ, ಬಿಲ್ಲು, ಬಾಣ, ಬರ್ಚಿ, ಮುಂತಾದ ಶಸ್ತ್ರ ಸನ್ನಾಹಕ್ಕೆ ಕೊರತೆಯಿಲ್ಲ. ಚಿತ್ರದುರ್ಗವು ಮಹಾಬಲಿ ಹಿಡಿಂಬಾಸುರನ ಸ್ಥಳ. ಮಹಾವೀರ ಭೀಮಸೇನನು ವರ ಕೊಟ್ಟು ಹರಿಸಿದ ಭೂಮಿ. ಹಿಂದಿನ ಯುಗದಲ್ಲಿ ಹಿಡಿಂಬಾಸುರನು ಭೀಮಸೇನನೊಡನೆ ಯುದ್ಧ ಮಾಡಿ ಸೋತು ಬಿದ್ದುಕೊಂಡಿರುವಾಗ, 'ನಾನಸಕ ಸೋತೆನು. ಮುಂದಕ್ಕೆ ಇಲ್ಲಿಯ ಜನಗಳು ಯಾವಾಗಲೂ ಆರೋಗ್ಯವಾಗಿದ್ದು, ಯಾರು ಬಂದರೂ ಗೆಲ್ಲಬೇಕೇ ಹೊರತು ಸೋಲಕೂಡದು' ಎಂದು ಬೇಡಲು, ಭೀಮಸೇನನು ಆ ಪ್ರಕಾರ ವರವನ್ನು ಕೊಟ್ಟಿದ್ದಾನೆ.

"ಚಿತ್ರದುರ್ಗದವರು ನಿತ್ಯ ಕಲಿಗಳು. ಚಿತ್ರದುರ್ಗವು ಕಡುಗಲಿಗಳ ಜನ್ಮಭೂಮಿ. ಚಿತ್ರದುರ್ಗವು ಗಂಡುಗಲಿಗಳ ಗಂಡುಭೂಮಿ!"

ಹೈದರ ಅಲಿ ಮುಂದೆ ಮಾತಾಡಲಿಲ್ಲ. ರಾಯಭಾರಿಗಳಿಗೆ ತಾಂಬೂಲ ವನ್ನು ಕೊಟ್ಟು ಕಳಿಸಿಬಿಟ್ಟನು.

---